ಅರೆಬಾಸೆ

# ಮುದ್ದು

ಜಾಳ್ತೆ ಮತ್ತೆ ಪೆರಗಾಳ್ದ

ಸಂಪುಟ–2

ಸಂಚಿಕೆ–5



## ತಿಂಗ ಪತ್ರಿಕೆ

ವಿನೋದ್ ಮೂಡಗದ್ದೆ ಸಾರಥ್ಯಲಿ

# ಕಾವೇರಿ ಹೋಂ ಅಪ್ಲೈಯೆನ್ಸಸ್

**ಕುಕ್ಕರ್ಸ್**



**ಮಿಕ್ಸರ್ ಗ್ರೈಂಡರ್ಸ್**



**ಗ್ಯಾಸ್ ಸ್ಟೌವ್**



**ಕುಕ್‌ವೇರ್ಸ್**



**ಸ್ಮಾಲ್ ಅಪ್ಲೈಯೆನ್ಸಸ್**



ಸಂಪರ್ಕಿಸಿ : **ಚೀಯಪ್ಪನ ನವೀನ್ / ಚೀಯಪ್ಪನ ಶರತ್**

ದೂರವಾಣಿ ಸಂಖ್ಯೆ: +91–8884571075 / +91–8861833243 /080–41228359

Email Id: homeappliances.kaveri@gmail.com

#23/8, ಚಾಮುಂಡೇಶ್ವರಿ ಕಾಂಪ್ಲೆಕ್ಸ್, ಚಾಮುಂಡೇಶ್ವರಿ ಲೇಔಟ್, ಶಾಂತಿನಿಕೇತನ್ ಮುಖ್ಯ ರಸ್ತೆ,
ನಿರಂಜನ್ ಮ್ಯಾಕ್ಸಿಮಾ ಅಪಾರ್ಟ್‌ಮೆಂಟ್ ಎದುರು, ಬಿ.ಜಿ. ರಸ್ತೆ, ಅರೆಕೆರೆ, ಬೆಂಗಳೂರು–560076

*** ಅರೆಬಾಸೆ ಮುಡ್ಪು ಪತ್ರಿಕೆನ ಚಂದಾ ಹಣನ ಇಲ್ಲಿ ಸ್ವೀಕರಿಸಲಾದೆ.**

---

**ಚಂದಾದಾರಲ್ಲಿ ಒಂದು ಮನವಿ:**

ನಮ್ಮ ಈ ಅರೆಬಾಸೆ ಮುಡ್ಪು ಪತ್ರಿಕೆ ಒಂದು ವರ್ಷನ ಪೂರೈಸುಟು. ಹವಲಾರ್ ಜನ ಚಂದ ಹಣದೊಟ್ಟಿಗೆ ದೇಣಿಗೆನ ಸ ನೀಡಿ ಸಹಕರಿಸಿಯೊಳೊ. ಇನ್ನು ಸಾಕಷ್ಟ್ ಜನ ಚಂದಾರರ್ ಚಂದಾ ಹಣ ಕೊಡಿಕೆ ಬಾಕಿ ಒಳೊ. ಕೆಲವ್ ಫೋನಾಯಿಸಿ ಎಲ್ಲಿ ಹೆಂಗೆ ಕೊಡಕು ತ ಸ ವಿಚಾರಿಸಿಯೊಳೊ. ಈ ಕೆಳಗೆ ನಮ್ಮೊಟ್ಟಿಗೆ ಈ ಪತ್ರಿಕೆನ ಏಳಿಗೆಗೆ ಸಹಕರಿಸಿದ.. ಸಹಕರಿಸ್ತಾ ಇರ್ವ ಕೆಲವ್ ಜನರ ಹೆಸರ್ ಹಂಗೆ ದೂರವಾಣಿ ಸಂಖ್ಯೆಗ ಉಟ್ಟು. ನಿಮ್ಮ ಹಣನ ಅವರತ್ರ ತಲ್ಪಿಸಿರೂ ಆದೆ. ನಿಮ್ಮೆಲ್ಲರ ಪ್ರೋತ್ಸಾಹ ಸದಾ ಹಿಂಗೇ ಇರ್ಲಿ. ಹಂಗೆನೆ ಮುಂದಿನ ವರ್ಷದ ಚಂದಾ ನೀಡವು ಸ ಇವರ್ನ ಸಂಪರ್ಕಿಸಕ್.

| | | |
|---|---|---|
| ಕೊಂಪುಳಿ ಇಂದಿರ | ಮರಗೋಡು | 9448300755 |
| ಚೀಯಪ್ಪನ ಜಲಜಾಕ್ಷಿ | ಮೂರ್ನಾಡು | 9980030582 |
| ಮೇರ್‌ಕಜೆ ಲೋಹಿತ್ | ಮೂರ್ನಾಡು | 9980777704 |
| ಚೀಯಪ್ಪನ ನವೀನ್ | ಬೆಂಗಳೂರು | 8884571075 |
| ಕೊಂಬಂಡ ಭೀಮಯ್ಯ | ಮೈಸೂರು | 9741533567 |
| ಅಮೆಮನೆ ಪಾಲಾಕ್ಷ | ಮಡಿಕೇರಿ | 9449767424 |

**ಇಲ್ಲೆ ತೇಳ್ರೆ ನೇರ ಬ್ಯಾಂಕ್ ಖಾತೆಗೆ ಸ ಜಮಾ ಮಾಡಕ್**

ಹೆಸರ್: **Vinodh M.N**
ಖಾತೆ ಸಂಖ್ಯೆ: **036001532462**
ಬ್ಯಾಂಕ್: **ICICI Bank**
ಶಾಖೆ: **Electronic City**
ಐ.ಎಫ್.ಸಿ ಕೋಡ್ : **ICIC0000360**
**Paytm: 9535615759**



ಮುದ್ರಕರು : **ನೇಹಾ ಕ್ರಿಯೇಷನ್ಸ್,** ಬನಶಂಕರಿ 2ನೇ ಹಂತ, ಬೆಂಗಳೂರು–70.
ಕೂಡಕಂಡಿರ ತಮ್ಮಯ್ಯ, 98453 19878, 080–26710552

## ಸಂಪಾದಕೀಯ

ಎಲ್ಲವ್ಕೂ ನಮಸ್ಕಾರ, ಈ ಪುಸ್ತಕ ನಿಮ್ಮ ಕೈ ಸೇರ್ದ ಹೊತ್ತ್‌ಲಿ ಕೊಡಗ್‌ನ ಸುಗ್ಗಿ ಹಬ್ಬ ಹುತ್ತರಿ ಕಳ್ದ್ ಹಂಗೆನೆ ಆಂಗ್ಲ ಹೊಸ ವರ್ಷ ಕೂಡ ಕಳ್ದುಟು.

ಆಗಸ್ಟ್ ಲಿ ನಡ್ದ ಮಹಾ ಮಳೆನ ದುರಂತಕ್ಕೆ ಸಿಕ್ಕಿದವರ ಕಷ್ಟ ಇನ್ನ್ ಸ ತೀರ್ತ್‌ಲೆ. ಸರಕಾರದ ಕಡೆಂದ ಕಟ್ಟಿ ಕೊಡ್ತಾ ಇರ್ವ ಮನೆ ಇನ್ನ್‌ಸ ಮುಗಿಯುವ ಲಕ್ಷಣ ಕಾಣ್ತಾ ಇಲ್ಲೆ. ಇದ್ದ ಗದ್ದೆ ತೋಟ ಕಳ್ಕಂಡ ಅವು ದಿಕ್ಕು ತೋಚದೆ ಜೀವನ ನಡ್ಸ್‌ತಾ ಒಳೊ.

ಇನ್ನ್ ಬೇರೆ ಕಡೆ ಇರವು ಗದ್ದೆ ನೆಟ್ಟವು ಬೆಳೆ ಕೊಯ್ದ್ ಆಗಲೆ ಗದ್ದೆ ಕೆಲ್ಸ ಮುಗ್ಸೊಳೊ. ಈಗ ಎಲ್ಲವೂ ಕಾಫಿ ಕೆಲ್ಸಲಿ ಒಳೊ. ಈ ಸಲನ ಮಳೆಗೆ ಲಾಯ್ಕ ಹೂ ಬುಟ್ಟ್ ಇದ್ದ ಕಾಫಿ ಈಗ ಹಂಞ ಮಾತ್ರ ರೈತರ ಕೈ ಸೇರುಟು. ಇನ್ನೊಂದ್ ಕಡೆಗೆ ಒಳ್ಳಮೆಣ್ಸ್ ಬಳ್ಳಿ ಎಲ್ಲ ಒಣ್ಗಿ ಹೋಗಿ ರೈತರಿಗೆ ಇನ್ನಷ್ಟ್ ಸಂಕಷ್ಟ ತಂದ್ ಇಸುಟು. ಒಳ್ಳ ಮೆಣ್ಸ್ ಇಲ್ಲದವರ ಚಿಂತೆ ಹಿಂಗೆ ಆದರೆ, ಇದ್ದವ್ಕೆ ಸರಿಯಾದ ಬೆಲೆ ಇಲ್ಲದೆ ಅವು ಸ ಚಿಂತೆಲೇ ಒಳೊ. ಅಂತೂ ಈ ಸಲನ ಪ್ರಕೃತಿ ವಿಕೋಪ ನೇರ ಹಂಗೆ ಪರೋಕ್ಷವಾಗಿ ಎಲ್ಲರ ಮೇಲೂ ಪರಿಣಾಮ ಬೀರುಟು. ಇನ್ನ್ ಮುಂದೆನ ದಿನಗಳ್ಲಿ ಆದರೂ ಪ್ರಕೃತಿ ಜನರ ಮೇಲೆ ಕರುಣೆ ತೋರ್ಸಲಿ ತ ಹಾರೈಸುನೊ.

ಇತ್ತೀಚೆಗೆ ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕಡೆಂದ ಬೇರೆ ಬೇರೆ ಲೇಖಕರ ಪುಸ್ತಕಗಳ ಬಿಡುಗಡೆ ಮಾಡ್ದೊ. ಇದ್ ಒಳ್ಳ ವಿಚಾರ. ಈಗೀಗ ಹೆಚ್ಚ್ ಹೆಚ್ಚ್ ಜನ ಅರೆಬಾಸೆ ಸಾಹಿತ್ಯದ ಕಡೆ ಆಸಕ್ತಿ ತೋರಿಸ್ತಾ ಒಳೊ. ಹಂಗೆ ಅವ್ಕೆ ಪ್ರೋತ್ಸಾಹನ ಕೊಟ್ಟರೆ ಇನ್ನಷ್ಟ್ ಲಾಯ್ಕದ ಪುಸ್ತಕಗ ಸಾಹಿತ್ಯ ಲೋಕಕ್ಕೆ ಅರ್ಪಣೆ ಆದೆ.

ಇದರೊಟ್ಟಿಗೆ ನಮ್ಮ ಕಲೆ ಸಂಸ್ಕೃತಿನ ಉಳ್ಸುವ ಕಡೆಗೆ ಸ ನಾವ್ ಒತ್ತ್ ಕೊಡಕು. ಇನ್ನೇನು ಮುಂದೆನ ತಿಂಗಳ್‌ಂದ ಮದುವೆಗ ಸುರು ಆದವೆ. ಕೆಲವ್ ಕಡೆ ಒಮ್ಮೆ ಮುಗ್ದರೆ ಸಾಕ್ ತ ಮದ್ವೆಗೆ ಆಗಿ ಹೋದೆ. ಹಂಗೆ ಮಾಡದೆ, ನಮ್ಮ ಮೂಲ ಸಂಪ್ರದಾಯ ಆಚರಣೆಗ ಏನು ಉಟ್ಟೋ ಅದರ್ನ ಪಾಲಿಸಿಕಂಡ್, ಉಳ್ಸಿಕಂಡ್ ಮುಂದೆನ ಪೀಳಿಗೆಗೆ ತಲ್ಪಿಸುವ ಕೆಲ್ಸ ಹಿರಿಯವು ತಿಳ್ದವು ಮಾಡಕು. ಇಲ್ಲರೆ ಮುಂದೊಂದು ದಿನ ಯಾವುದೇ ಹಳೆ ಸಂಪ್ರದಾಯಗ ಕಾಂಬಕೆ ಸಿಕ್ಕುಲೆ.

ಈ ವರ್ಸ ಚಳಿ ಹಂಞ ಹೆಚ್ಚಾಗೇ ಉಟ್ಟು. ವರ್ಸಂದ ವರ್ಸಕ್ಕೆ ಪ್ರಕೃತಿಲಿ ಬದಲಾವಣೆನ ಕಾಣ್ತಾ ಒಳೊ. ಹಿಂಗೆ ಇದ್ ಮುಂದುವರ್ದರೆ ಬಾಳ ಕಷ್ಟ ಉಟ್ಟು. ಪರಿಸರ ಸಂರಕ್ಷಣೆ ಕಡೆ ಸ ನಾವ್ ಗಮನ ಕೊಡಿಕಾಡೆ ಇಲ್ಲರೆ ಇದ್ ನಮ್ಮ ಮೇಲೆ ನೇರ ಪರಿಣಾಮ ಬೀರದೆ ಇರ್ದುಲೆ.

ಕಥೆ, ಕವನ, ಲೇಖಗಳ ಈ ಸಂಚಿಕೆನ ನಿಮ್ಮ ಮುಂದೆ ಇಸ್ತಾ ಒಳೆ. ಅದೇ ಪ್ರೀತಿ ವಿಶ್ವಾಸಂದ ಸ್ವೀಕರ್ಸಿ. ಏನಾದರ್ ಸಲಹೆ ಸೂಚನೆಗ ಇದ್ದರೆ ತಪ್ಪದೇ ನಂಗೇ ನೇರ ತಿಳ್ಸಿ. ಮತ್ತೆ ಮುಂದಿನ ಸಂಚಿಕೆಲಿ ಕಾಂಬನೋ.

ನಿಮ್ಮ ಪ್ರೀತಿಯ
**ವಿನೋದ್**

# ಯೋಗ
## (ಒಂದ್ ಜೀವನ ಕ್ರಮ)

**–ಹೊಳೆಕೆರೆ ಆರ್ ಚೆಂಗಪ್ಪ**

**ಯೋಗ**

ಸರೀರನ ಹಿಂದೆ–ಮುಂದೆ ಬಗ್ಗಿಸಿ, ಎಡ–ಬಲ ತಿರ್ಗಿಸಿ ಸುಸ್ತ್ ಮಾಡಿಕಂಬದ್ ಯೋಗ ಅಲ್ಲ! ಕೆಲ್ಸ ಕಾರ್ಯನ ಬುಟ್ಟ್ ಕಣ್ ಮುಚ್ಚಿಕಂಡ್ ಕುದ್ಕಂಬದ್ ಧ್ಯಾನ ಅಲ್ಲ! ಯೋಗ, ಧ್ಯಾನತೇಳಿರೆ ಅದೊಂದ್ ಜೀವನ ಕ್ರಮ ಅಷ್ಟೆ!!

**ಯೋಗ – ಸಾಮಾನ್ಯ ತಿಳುವಳಿಕೆ**

ಯೋಗ ನಮ್ಮ ದೇಶಲಿ ಸಾವಿರಾರ್ ವರ್ಷಗಳ್‌ಂದ ಇದ್ದರೂ, ನಮ್ಮ ದೇಶದವೇ ಯೋಗ ಮಾಡುದು ಕಮ್ಮಿ! ಮುಂದಕ್ಕೆ ಬಗ್ಗುದು, ಹಿಂದಕ್ಕೆ ವಾಲುದು, ಕೈ ಮೇಲೆ ಎತ್ತುದು, ಕಾಲ್ ನೀಡುದು ಈ ಸರ್ಕಸ್ ನಮ್ಗೆ ಅಲ್ಲ ಇದೆಲ್ಲಾ ಯೋಗ ಪಟುಗಳ್ಗೆ ಮಾತ್ರ ಸರಿಂತ ಜನಗಳ ಅಬಿಪ್ರಾಯ! ಕೆಲವ್ ಜನಗ ನಾವೆಲ್ಲ ಗದ್ದೆಲಿ, ಕಾಪಿತೋಟಲಿ ಕೆಲ್ಸ ಮಾಡುವೆ, ನಡ್ದವೆ, ನಮ್ಗೆಲ್ಲ ಯೋಗ ಬೇಕಾಗಿಲ್ಲೆ, ಅದೆಲ್ಲಾ ಟವ್ನ್‌ಲಿ ಕುದ್ಕಂಡ್ ಇರವ್ಕೆ ಲಾಯ್ಕ್‌ಂತ ಹೇಳ್ವೆ!

**ಯೋಗ ಮನ್ಸ್‌ದ್ ತಿಳುವಳಿಕೆ**

ಉಂಬದು, ಕುಡಿಯದು, ನಿದ್ದೆ, ಹೊರ್ಕಡೆ ಹೋದು, ಮೀಯದು, ದೇವ್ರ್‌ಗೆ ಕೈ ಮುಗಿಯೊದು, ಸಂಸಾರ ಮಾಡ್ದು ಎಷ್ಟ್ ಅನಿವಾರ್ಯನೊ, ಯೋಗ ಜೀವನ ಅಷ್ಟೇ ಅನಿವಾರ್ಯ. ತರ್ಕಾರಿ, ನೀರುಳ್ಳಿ, ಅರ್ಶಿಣ, ಮೆಣ್ಸ್ ಹೊಡಿ, ಸಂಬಾರ ಹೊಡಿ, ಉಪ್ಪು, ಉಳಿ ಇದ್ದರೆ ಒಂದ್ ಗೈಪು ಆದೆ, ಅದೇ ತರ ಬದ್ಕ್‌ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಇದ್ದರೆ ಸಮಾದಿ ಆದೆ. ಸಮಾದಿತೇಳಿರೆ ಗೋರಿ ಅಲ್ಲ! ಅದ್ ಮನ್ಸ್‌ದ್ ತಿಳುವಳಿಕೆ!!

**ಆಸನ ಪ್ರಾಣಾಯಾಮ**

ವ್ಯಾಯಾಮ ಮಾಡ್ದುನ ಯೋಗಲಿ ಆಸನಾಂತ ಕರ್ದವೆ. ವ್ಯಾಯಾಮ ಮಾಡಿಕನ ನಿದಾನಲಿ, ಒಂದ್ ಕ್ರಮಲಿ, ಉಸಿರಾಡುದೇ ಪ್ರಾಣಾಯಾಮ. ನಮ್ಮ ಸರೀರ ಮಣ್ಣ್, ನೀರ್, ಬೆಂಕಿ, ಗಾಳಿ, ಆಕಾಸ ಈ ಪಂಚಭೂತಗಳ್‌ಂದ ಆಗಿದ್ದದೆ. ಪಂಚಭೂತಗ ಅಣುಗಳ್‌ಂದ ಆದವೆ. ಅಣುಗ ಆಕಾಸಂದ ಆದವೆ. ಆಕಾಸತೇಳಿರೆ ಖಾಲಿ ಜಾಗ ಅಲ್ಲ! ಅದ್ ದೈವ ಕಣಗಳ ರಾಸಿ!! ಅಣುಗ ಯಾಗೋಳ್ ಸುತ್ತುತ್ತಾ ಇದ್ದವೆ. ಅಣುಗ ಸುತ್ತಿಕನ ಆಯಸ್ಕಾಂತ ಶಕ್ತಿ ಹುಟ್ಟಿದೆ. ನಮ್ಮ ಸರೀರಲಿ 1) ರಕ್ತ 2) ಉಷ್ಣ 3) ಗಾಳಿ 4) ಪ್ರಾಣಶಕ್ತಿ 5) ಆಯಸ್ಕಾಂತ ಶಕ್ತಿ ಒಂದ್ ಕ್ರಮಲಿ ಹರೀತಾ ಇದ್ದವೆ. ನಮ್ಮ ಅವಸರದ ಜೀವನ ಕ್ರಮಂದ ಒಂದೊಂದ್ ಸಲ ಕ್ರಮ ತಪ್ಪಿ ಹೋಗಿ ನಮ್ಗೆ ಉಸಾರಿಲ್ಲದೆ ಆದೆ. ನಾವು ವ್ಯಾಯಾಮ ಮಾಡಿಕನ ರಕ್ತ, ಉಷ್ಣ, ಗಾಳಿ ಸರೀರಕ್ಕೆ ಬೇಕಾದ ಪ್ರಮಾಣಲಿ ಹಂಚಿಕೆ ಆದೆ. ವಾತ, ಪಿತ್ತ, ಕಫ ಯಾವ ದೋಷಗ ಬಾದುಲ್ಲೆ. ಪ್ರಾಣಶಕ್ತಿ ಹೆಚ್ಚಾಗಿ ಸರೀರಕ್ಕೆ ಒಳ್ಳೆ ತ್ರಾಣ ಬಂದದೆ. ಆಯಸ್ಕಾಂತ ಶಕ್ತಿ ರಭಸ ಆಗಿ ಮನ್ಸ್‌ಗೆ ಇಚ್ಚಾಶಕ್ತಿ ಬಂದದೆ.

**ಪ್ರತ್ಯಾಹಾರ**

ನಮ್ಮ ಜೀವಮಾನಲಿ ನಮ್ಗೆ ಏನೇನೊ ಆಸೆಗ ಇದ್ದವೆ. ನಮ್ಮ ಪಂಚೇದ್ರಿಯಗ ನಮ್ಮಲಿ ಆಸೆನ ಹುಟ್ಟುಸುವೆ. ಚಕ್ಕಳಕ್ಕೆ ಬೆಚ್ಚಂಗಿರುವ ಆಸೆ, ನಾಲಿಗೆಗೆ ರಸ ರಸ ತಿನ್ನುವ ಆಸೆ, ಮೂಗುಗೆ ಗಮ ಗಮ ಮೂಸುವ ಆಸೆ, ಕಣ್ಣ್‌ಗೆ ಲಾಯ್ಕ್ ಲಾಯ್ಕ್ ನೋಡುವ ಆಸೆ, ಕಿಮಿಗೆ ರಾಗನ ಕೇಳುವ ಆಸೆ. ಮುಟ್ಟುದು, ಮೂಸುದು, ತಿಂಬದು, ಕೇಳ್ದು, ನೋಡ್ದು, ಈ ಆಸೆಗಳ್ನ ಒಂದೂ ಬುಡದೆ ಎಲ್ಲಾ ತೀರ್ಸಿಕಂಬದೇ ಪ್ರತ್ಯಾಹಾರ! ಈ ಆಸೆಗಳ್ನ ತೀರ್ಸಿಕಣಿಕನ ನಮ್ಗೆ

ಆಗಲಿ ಬೇರೆ ಯಾರಿಗೇ ಆಗಲಿ, ಇಂದ್ ಆಗಲಿ ಮುಂದಕ್ಕೆ ಆಗಲಿ, ಸರೀರಕಾಗಲಿ, ಮನ್ಸ್‌ಗಾಗಲಿ ಬೇನೆ, ತೊಂದರೆ ಆಕೆಬತ್ ಅಷ್ಟೆ!!

**ಧಾರಣ**
ತಿಳ್ದವ್ ಒಂದ್ ಮಾತ್ ಹೇಳ್ವೆ "ವರ್ತಮಾನಲಿ ಬದ್ಕಿಂತ"! ಇದರ ಅರ್ಥ–ನೆನ್ನೆ ಆಗಿ ಹೋದ ಸಂಗತಿಗಳ್‌ನ ಜಾಸ್ತಿ ಗ್ಯಾನ ಮಾಡದೆ, ನಾಳೆಗೆ ಹೆದ್ರದೆ, ಇಂದ್ ಏನ್ ಮಾಡ್ತಾ ವೋಳೊ ಅದರ ಮೇಲೆ ಮನ್ಸ್ ಮಡ್ಗಿ ಬದ್ಕುದು. ನಮ್ಮ ಇಂದ್‌ನ ಕಾರ್ಯಕ್ರಮದ ಮೇಲೆ ಪೂರ್ತಿ ಮನ್ಸ್ ಮಡ್ಗಿ ಕಾರ್ ಬಾರ್ ಮಾಡುದೇ ಧಾರಣ! ಕೆಲ್ಸ ಒಂದ್ ಕಡೆ, ಮನ್ಸ್ ಇನ್ನೊಂದ್ ಕಡೆ ಇರಿಕ್ಕೆ ಬತ್!!

**ಧ್ಯಾನ**
ಮಾಡುವ ಕೆಲ್ಸದ ಮೇಲೆ ಪೂರ್ತಿ ಗ್ಯಾನ ಮಡ್ಗಿ ಕೆಲ್ಸ ಮಾಡಿರೆ ಆ ಕೆಲ್ಸ ಲಾಯ್ಕಾಗಿ ಆದೆ. ಕೆಲ್ಸ ಮನ್ಸ್ ಒಂದ್ ಆಗಿ ಕೆಲ್ಸ ಮಾಡ್ತಾ ಇರ್ಕನ ಮನ್ಸ್ ಓಲಾಡುದು ಕಮ್ಮಿ ಆಗ್ತಾ ಇದ್ದದೆ, ಹಂಗೆ ಮನ್ಸ್ ತಿಳಿ ಆಗ್ತಾ ಇದ್ದದೆ. ಮನ್ಸ್ ಓಲಾಡುದ್ ಕಮ್ಮಿ ಆಗುವಂಗೆ ಕೆಲ್ಸ ಮಾಡುವ ಕ್ರಮನೇ ಧ್ಯಾನ!!

**ಸಮಾಧಿ**
ನಾವು ಮಾಡುವ ಪ್ರತಿಯೊಂದ್ ಕೆಲ್ಸಗಳ ಮೇಲೆ ಪೂರ್ತಿ ಗ್ಯಾನ ಮಡ್ಗಿ ಕೆಲ್ಸಗಳ್ನ ಲಾಯ್ಕಾಗಿ ಮಾಡಿ ತೀರ್ಸುವ ಅಭ್ಯಾಸ ಮಾಡಿಕಂಡರೆ ಕಡೆಗೆ ಮನ್ಸ್ ಓಲಾಡುದು ನಿತ್‌ಹೋದೆ. ಮನ್ಸ್, ಕನ್ನಡಿ ತರ ತಿಳಿ ಆದೆ. ತಿಳಿಯಾದ ಮನ್ಸೆ ಸಮಾಧಿ!!

**ಯಮ ನಿಯಮ**
ಬದ್ಕ್‌ಲಿ ಯಾವ ಯಾವ ತಪ್ಪುಗಳ್ನ ಮಾಡಕ್ಕಾಗದ್ ತೇಳುವ ತಿಳುವಳಿಕೆ ಯಮ. ಹಂಗೆ ಬದ್ಕ್‌ಲಿ ಸರಿಯಾಗಿ ನಡ್ಕಣುವಂತ ತಿಳುವಳಿಕೆ ನಿಯಮ. ತಿಳಿಮನ್ಸ್‌ಗೆ ಯಾವುದು ತಪ್ಪು ಯಾವುದು ಸರಿತೇಳುವ ಯಮ–ನಿಯಮದ ತಿಳುವಳಿಕೆ ಬಂದ್ ಮಾಡುವ ಕೆಲ್ಸಗೆಲ್ಲಾ ಒಳ್ಳೆದೇ ಆದವೆ. ಆಸನ–ಪ್ರಾಣಾಯಾಮಂದ ಸರೀರ ಮನ್ಸ್ ಬಲ ಆದವೆ. ಪ್ರತ್ಯಾಹಾರಂದ ಮನ್ಸ್ ತನ್ನಲ್ಲಿರುವ ಎಲ್ಲಾ ಆಸೆಗಳ್ನ ಪೂರೈಸಿಕಂಡ್ ಸಂಯಮ ಬೆಳ್ಸಿಕಂಡದೆ. ವಸ್ತುಗಳ್‌ಂದ ಸಿಕ್ಕುವ ಸುಕಕ್ಕಿಂತ ಪ್ರೀತಿ ವಿಶ್ವಾಸ ತುಂಬಿದ ಜೀವನ ಸುಕ ಕೊಟ್ಟದೆತೇಳುವ ಸಂಗತಿ ಧಾರಣ, ಧ್ಯಾನ, ಸಮಾಧಿಂದ ಅನುಭವ ಆದೆ!

**ಪೊಕ್ಕಳ ರೊಟ್ಟಿ–ಕುಡು ಪಜ್ಜಿ**
ಯೋಗ ಮಾಡಿರೆ ಕಾಯಲಗ ವಾಸಿ ಆದೆಂತ ತುಂಬಾ ಜನಗಳ ಅಭಿಪ್ರಾಯ. ಒಂದ್ ಕಾರ್ ಕೆಟ್ ಹೋದರೆ ಮೆಕಾನಿಕ್ ರಿಪೇರಿ ಮಾಡ್ದೆ. ಕಾರ್‌ನ ಮನ್ಸ ಮಾಡಿದರ್‌ಂದ ಮೆಕಾನಿಕ್‌ಗೆ ಕಾರ್‌ದ್ ಮೆಕಾನಿಸಮ್ ಎಲ್ಲಾ ಗೊತ್ತಿದ್ದದೆ. ದೇವ್ರ್ ಮಾಡ್ದ ನಮ್ಮ ಸರೀರದ ಪೂರ್ತಿ ಮೆಕಾನಿಸಮ್ ವೈದ್ಯ ಧನ್ವಂತರಿಗಲ್ಲದೆ ಬೇರೆ ಯಾರಿಗೂ ಗೊತ್ಲೆ! ಹಂಗಾಗಿ ಯೋಗಕ್ಕೆ ಕಾಯಲ ಗುಣ ಮಾಡುವ ಶಕ್ತಿ ಇದ್ದರೂ ಯೋಗ ಮಾಡವ್ಕೆ ಅದ್ ಯಾವ ಕಾಯಲಂತ ಪತ್ತೆ ಮಾಡಿಕೆ ಆದುಲ್ಲೆ. ಕಾಯಲ ಪತ್ತೆ ಆಗದ ಮೇಲೆ ಯಾವ ಆಸನ–ಮುದ್ರೆ ಹಾಕುದು? ಅಂದರೂ ಸರೀರಕ್ಕೆ, ಮನ್ಸ್‌ಗೆ, ಸಮಾಜಕ್ಕೆ ಬರುವ ಕಾಯಲನ ಯೋಗ ಸಲ್ಪ ಮಟ್ಟಿಗೆ ತಡಿಯದಂತೂ ಗ್ಯಾರಂಟಿ! ಮೀಯದುರ್‌ಂದ ಸರೀರ ಮನ್ಸ್ ಹೆಂಗೆ ಚಟುವಟಿಕೆಂದ ಇದ್ದದೆಯೊ ಹಂಗೆ ಯೋಗ ಅಭ್ಯಾಸಂದ ಸರೀರ ಮನ್ಸ್ ದಿನ ಪೂರ್ತಿ ಚಟುವಟಿಕೆಂದ ಇದ್ದದೆ. ಪೊಕ್ಕಳ ರೊಟ್ಟಿ–ಕುಡು ಪಜ್ಜಿ ಜೊತೆ ಬೆಣ್ಣೆ ಇದ್ದರೆ ರಸ ಜಾಸ್ತಿಯಾದು ಎಷ್ಟ್ ನಿಜನೊ! ಹಂಗೆ "ಯೋಗ" ಜೀವನ ನಡ್ಸಿರೆ ಸಮಾಜಲಿ ಪ್ರೀತಿ–ವಿಶ್ವಾಸ ಹೆಚ್ಚಾದೆತೇಳ್‌ದ್ ಅಷ್ಟೇ ನಿಜ!!

# ಆಶ್ಲೇಷ ಮಳೆನ ಪ್ರಭಾವ

**–ಬೈತಡ್ಕ ಜಾನಕಿ ಬೆಳ್ಯಪ್ಪ**

ಈ ವರ್ಷದ ಕತೆನ ಎಂತತ ಹೇಳ್ದು. ಎಲ್ಲಾ ಪ್ರಕೃತಿ ನಿಯಮ. ನಮ್ಮ ನೆಲ ಕೊಡಗ್‌ಲಿ ಜಲಪ್ರಳಯ ಆತ್. ಹಂಗಾಗಿ ಹದಿಮೂರು ಗ್ರಾಮಗ ನೆಲಸಮ ಆಗಿ ಎಷ್ಟೋ ಜನರ ಗದ್ದೆ, ಆಸ್ತಿ, ಮನೆ ಮಾರ್ ತೋಟ ಕಳ್ದೋತ್. ಅದಕ್ಕೆಲ್ಲಾ ವಿಪರೀತ ಮಳೆನೆ ಕಾರಣ. 240 ಇಂಚ್ ಮಳೆ ತೇಳ್ರೆ ಎಂತದ್ ಮಡಿಕೇರಿ ಕೆಲ ಲೇಔಟ್‌ಗಳಿಗೂ ನೀರ್ ಸೇರಿ ವಾಹನ ಸಂಚಾರ ಇತ್ಲೆ. ಬರೀ 120 ಇಂಚ್ ಬರ್‍ತಾ ಇದ್ದ ಮಡಿಕೇರಿಗೆ ಆಶ್ಲೇಷ ಮಳೆ ಬಂದ್ ಭೂಮಿನ ತೇಲುವಂಗೆ ಮಾಡ್ತ್. ಅದ್ಕೂ ಮುಂಚೆ ಒಂದ್ ದಿನ ಭೂಮಿ ಗಡ ಗಡ ನಡ್ಗಿತ್ತ್. ಹಂಗಾಗಿ ಮಳೆ ನೀರೆಲ್ಲ ಅದರೊಳಗೆ ತೇಳ್ರೆ ಬಿರುಕು ಒಳಗೆ ಹೋಗಿ ಎಲ್ಲೋ ಒಂದ್ ಕಡೆ ಹೊರ್ಡ್‌ಕೆ ಬೆಟ್ಟದೊಳಗೆ ಗರ ಗರ ತ ವಿಚಿತ್ರ ಸದ್ದ್ ಮಾಡ್ತಿದ್ದದ್ ಎಲ್ಲವ್ಕ ಕೇಳುಟು. ನಿತ್ತ ನೆಲ ಪಾತಾಳಕ್ಕೆ ಹೋದೆ ತೇಳಿ ಜನ ಹೆದ್‌ರ್‌ದೊ.

ಈ ಸಲದ ಆಶ್ಲೇಷ ಮಳೆನ ಮಹಾ ಮಳೆ, ರಣ ಮಳೆ ಮಾರಿ ಮಳೆತ ನಾಕಾರ್ ಹೆಸ್ರ್ ಪಡ್ಕಂಡ ಮಳೆನ ವಿಶೇಷ ಪ್ರಭಾವನ ಮಾಧ್ಯಮದವು ಮಾಲೆ ಪಿಟಾಕಿನಂಗೆ ಚುರ್‌ದ್ ವರ್ಣಿಸಿ ವರದಿ ಮಾಡ್ದೊ. ಕಡೆಗೆ ಜಲಪ್ರಳಯ, ಭೂಕಂಪತೇಳಿ ದೃಶ್ಯ ಮಾಧ್ಯಮದ ಮೂಲಕ ನೋಡಿ ಜನ ಹೆದರಿ ನಡ್ಗಿದೊ. ಕಡೆಗೆ ಮಹಾಮಳೆ ಪ್ರಕೃತಿ ವಿಕೋಪದ ಹೆಸ್ರ್ ಪಡ್ಕಂಡ್ ಅಂತ್ಯ ಕಂಡತ್. ಹಿರಿಯವು ಹೇಳ್ತಾ ಇದ್ದ ಭೂಕಂಪನ ನಮ್ಮ ಕಣ್ಮುಂದೆ ನೋಡೋ ಹಂಗಾತ್.

ಭೂಮಿಗೆ ಕೆಲ ನಕ್ಷತ್ರದ ಮಳೆಗ ಭಾದೆ ಕೊಟ್ಟವೆತ ಹೇಳ್‌ಕನ ನೆಗೆ ಬರ್‍ತಿತ್ತ್. ಅಂತ ಮಳೆ ನಕ್ಷತ್ರದ ಮಳೆಗ ಹೆಂಗೆ ಏನ್‌ಂತೇಳಿ ಹಾಡ್‌ಗ ಸ ಉಟ್ಟು. ಭರಣಿ ಮಳೆ ಬಂದರೆ ಭೂಮಿ ತಂಪಾದೆ. ಕಾರ್ತಿಂಗಲ್ಲಿ, ಆರಿದ್ರ ಮಳೆ ಬಂದ್ ಭೂಮಿನ ಹೂಡುವೆ, ಗೊಬ್ಬರ ಹಾಕುವೆ. ಆಟಿ ತಿಂಗಲ್ಲಿ ಕರಿಮೋಡ ಕವ್‌ದ್ ಪುನರ್ವಸು ಪುಷ್ಯ ಜೋರಾಗಿ ಬಂದ್ ಹೊಳೆ ತುಂಬಿದೆ. ಬರೆ ಜರ್‍ದದೆ ಜಡಿಮಳೆ ಮುಗೆಕಾಕನ ಆಶ್ಲೇಷ ಮಳೆನ ಯಾವ ನಂಬಿಕೆನೂ ಇರ್‍ದುಲೆ–ತ! ಆದರೆ ಅನಾಹುತ ಆದಕ್ಕೆಲ್ಲ ಈ ಆಶ್ಲೇಷ ಮಳೆನೇ ಕಾರಣ.

ಆಗಸ್ಟ್ 10ರ್‌ಂದ 16 ರ ಮುಟ್ಟ ಈ ಕೊಡಗ್‌ಲಿ ಅಲ್ಲೋಲ ಕಲ್ಲೋಲ ಆತ್. ಬಿರುಗಾಳಿ ಮಳೆನ ರಭಸ, ಅಮಾಸೆ ಕತ್ತಲೆನ ಸಂಕ್ರಮಣದ ಜಡಿಮಳೆ, ಸೂರ್ಯಗ್ರಹಣ ಎಲ್ಲಾ ಸೇರಿ ಭೂಮಿಲಿ ಬಿರ್‌ಕ್ ಕಂಡ್ ಒಡಿಯಕೆ ಸುರು ಆತ್. ಅದ್‌ಹೆಂಗೆತೇಳ್ರೆ ಬೆಟ್ಟ ಹಂಞ ಹಂಞನೇ ನಿಗರ್‌ಕಂಡ್ ಒತ್ತಿಕಂಡ್ ಬರ್‍ತಿತ್ತ್‌ಗಡ. ಇದ್ ನೋಡಿ ಜನ ಅಲ್ಲಿಂದ ಬುಟ್ಟ್ ಕಂಡ ಕಡೆಗೆ ಓಡಿಕೆ ಸುರು ಮಾಡ್ದೋ. ಕೆಲವ್ ಸಂಬಂಧಿಕರ ಮನೆಗೆ, ಇನ್ನ್ ಕೆಲವ್ ಜನ ಸಂತ್ರಸ್ಥರ ಕೇಂದ್ರಕ್ಕೆ ಹೋದೊ. ಪಾಪ ಪ್ರಾನಿಗಳ ಕತೆ ಹೇಳ್ದುಬ್ಯಾಡ. ಒಟ್ಟಿಗೆ ಬಸುರಿ, ಬಾಣ್‌ತಿ ಅಜ್ಜಿಕ ಸಾವು ಎಲ್ಲಾ ವಿಧಿನಿಯಮದಂಗೆ ನಡ್ದುಟು.

ಹದಿನಾರ್‌ನೇ ತಾರೀಖು ಬೊಳ್ಪುಗೆ ಜನಕೆ ಮನೆ ಇಲ್ಲೆ. ನೆಟ್ಟ್ ಬೆಳ್ಸಿದ ಗದ್ದೆ, ಫಸಲ್ ಕೊಡೊ ತೊಟಗ ತೀರ ಮಣ್ಣ್‌ಲಿ ಮಣ್ಣಾಗಿ ಹೋತ್. ಬೆಟ್ಟದ ಕೊಡಿಲಿ ಜಲ ಹುಟ್ಟಿ ಜಲಸ್ಫೋಟ ಆಗಿ ನೀರ್ ಮಣ್ಣ್ ಬಂಡೆಕಲ್ಲ್ ಎಲ್ಲಾ ಕೊಚ್ಚಿ ಹೊಳೆಲಿ ಹೋಗಿ ಹೊಳೆ ದಾರಿನೇ ಬದಲಾತ್. ಯಾವ ಊರುಗಳಿಗೂ ಸಂಪರ್ಕ ಇತ್ಲೆ. ಕರೆಂಟ್ ಇಲ್ಲೆ, ಫೋನ್ ಇಲ್ಲೆ, ಎಲ್ಲ ಕಡೆ ಕತ್ತಲೆ ಕತ್ತಲೆ. ಹಗಲ್ ಸ ಕತ್ತಲೆ ಕೂಡಿಕಂಡೇ. ಮುದ್ರಣಾಲಯಕ್ಕೆ ನೀರ್ ನುಗ್ಗಿ ವಿಷಯ ತಿಳ್ಕಣಿಕೆ ಪತ್ರಿಕೆ ಸ ಇಲ್ಲದಾಗಿತ್ತ್. ಇತ್ತ ಮಡಿಕೇರಿಗೆ ಬರುವ ನಾಕಾರ್ ದಾರಿಗ ಭೂಕುಸಿತಂದ ಪಾತಾಳಕ್ಕೆ ಜಾರಿ ಹೋಗಿತ್ತ್. ಎಲ್ಲಿಗೆ ಸ ಹೋಗುವಂಗೂ ಇತ್ಲೆ.

# ಚಿಕ್ಕಮ್ಮನ ಚಿಣೆತಿಂಟೆಲಿ

**_ಡಾ. ಪುನೀತ್ ರಾಘವೇಂದ್ರ ಕುಂಟುಕಾಡು**

ಯಾಗ ನೋಡ್ರೂ ನೀರಡಿ ಕೊಟೆಗೆನ ಬೂದಿ ಗುಡ್ಡೆಲಿ ಬೆಚ್ಚಂಗೆ ಮಲ್ಗ್ಯಂಡಿರುವ ಬೊಳ್ಳು ನಾಯಿ ಇಂದ್ ಜಾಲ್ ಕರೆಂದ ಅರೆಬಾಯಿಸುದರ ಕೇಳ್ದ ಚಿನ್ನಮ್ಮಕ್ಕಂಗೆ ಗೊತ್ತಾತ್ ಯಾರೋ ಬಾರದವೇ ಬಂದೊಳೊತ. ನಾಕ್ ದಿನಂದ ಹೊಯ್ತಿರುವ ರಣ ಮಳೆಂದಾಗಿ ಕರೆಂಡೂ ಇಲ್ಲೆ... ಒಟ್ಟಿಗೆ ಸಾರ್ ಗೈಪೂ ಇಲ್ಲೆ!! (ಕರೆಂಟ್ ಇಲ್ಲದೆ ಮಿಕ್ಸಿ ತಿರ್ಗುದು ಹೆಂಗೆ? ಅರೆಪ್ಪು ಕಡೆದಾರ್ ಹೆಂಗೆ ಇದ್ದದರ್ನೇ ಪಲ್ಯ ಮಾಡಿ ಸುಧಾರ್ಸ್ತೊಳೋ!)

ಕಡೆಗೂ ಗುಡ್ಸಿಟ್ಟ ಕುಂಟು ಮಾಯಿಪೇ ಗತಿಂತ ನೀರ್ ನೋಡದೆ ವರ್ಸನೇ ಕಳ್ದಿದ್ದ ಕಡ್ಕಲ್ಲ್‌ನ ಭಾರೀ ಭಂಗಲಿ ತೊಳ್ಕಂಡಿದ್ದವು, ಚಂಡಿ ಕೈನ ಸೆರ್‌ಂಗ್ ಕೊಡಿಗೆ ಒರ್ಸಿಕಂಡ್ ಯಾರ್ ಬಂದೊಳೊತ ನೋಡಿಕೆ ಹೊರ್ಟೋ. ಮಳೆಲೇ ಬರ್ತಿರವ್ಕೆ ನೀರ್ ಚೊಂಬು ತಾದೆಂತಕೆತ ಹೇಳಿಕಂಡೇ ಬಂದ ಮನೆ ಯಜಮಾಂತಿ ಚಿನ್ನಮ್ಮಕ್ಕಂಗೆ ಜಾಲ್‌ಂದಾಚೆ ಉದ್ಗಿಲ್‌ಂದೀಚೆ ಕಂಡ ರೂಪನೇ ಅಪ್ರೂಪ. ಚಂಡಿಯಾಕೆಬೊತ್ತುತ ಎತ್ತಿ ಕಟ್ಟಿದ ಸೀರೆ ಮೊಣ್ಕಾಲ್‌ಂದ ಮೇಲೆ ಬಂದುಟು! ಹನಿ ಮಳೆಗೆ ಮೂಂಡಿ ಕೆಸದ ಸೊಪ್ಪುನನೇ ತಲೆಮೇಲೆ ಅಡ್ಡಕ್ಕೆ ಹಿಡ್ಕಂಡ್ ಬಾತಿರುವ ಆಚೆಕರೆ ನೀಲಮ್ಮಕ್ಕ ಆಟಿ ಕಳೆಂಜ ಬರ್ತಿರುವಾಂಗೆ ಕಂಡದ್ ಮಾತ್ರ ಸುಳ್ಳಲ್ಲ!! ಕೂದಲ್ ಹಣ್ಣಾದರೂ ತಂಜಣೆ ಬುಡದ ನೂಲಮಕ್ಕನ ಮುಂದೆ ಜೆರ್‌ಂಜೆಲಕ್ಕಿ ಯಾವ ಲೆಕ್ಕ?? ಒಗ್ದ್ ಹಿಂಡದ ಬಟ್ಟೆನಾಂಗೆ ನೀರ್ ಹನ್ಕುಸುತಿರ್ವವರ ಚಿಣೆತಿಂಟೆಲೇ ನಿಲ್ಸ್‌ಸಿ ಚಾಯಕೆ ನೀರಿಸಿನೆತೇಳಿ ಹೊರ್ಟೋ ಚಿನ್ನಮಕ್ಕ.

ಮಾತೆಯರ ಮಾತ್ ಕತೆಗೆ ಮುದದಿಂದ ಮುನ್ನುಡಿಯೇಕೆ? "ಎಂಥಾ ರಣ ಮಳೆ ಚಿನ್ನಮ್ಮಕ್ಕಾ... ಬಾನ್ ನೋಡಿ ಎಷ್ಟ್ ದಿನ ಕಳ್ತೋ!! ಬೈಪಣೆಲೆದ್ರುವ ಬಿಳ್ಗ್ಲ್ ಅಳ್‌ಂಬು ನೇಕೆಲಿ ನೇಲ್ತಿರುವ ಬಟ್ಟೆಲಿ ಎದ್ರಿಕೆ ಒಂದ್ ಬಾಕಿ ಅಷ್ಟೆ. ಹಟ್ಟಿ ಅಂತೂ ಚೋಳ್ ಚೋಳಾಗಿ ಕಂಪ ಗದ್ದೆನಾಂಗಾಗುಟು. ಕಡೆಗೆ ಕರ್ ಬುಡುವ ಕೆಂಪಿ ಹಸ್‌ನ ಬಿಚ್ಚಿಕಂಡೋಗಿ ನೀರಡಿ ಕೊಟಗೆಲಿ ಕಟ್ಯೆಳೆ ಗೊತ್ತುಟಾ? ತೋಟಲ್ಯಂತೂ ನೀರ್ ನಿತ್ತ್ ಉಜಿರ್ ಕಣಿನೂ ಕೊಮ್ಮುನ ಬುಡನೂ ಒಂದೇ ಆಗುಟು. ಗೊನೆ ಹಾಕಿದ ಬಾಳೆಗೆಲ್ಲಾ ಬುಡ ಪೊರ್ದ್ ಅಡ್ಡಬಿದ್ದೊಳೊ. ನಿಮ್ಮ ಬಾವ ಒಬ್ಬ..ಗೊನೆ ಅಲ್ಯೇ ಇದ್ದರೆ ಕರ್ಗುದುತ ತಂದ್ ತಂದ್ ಮೂಲೆಲಿ ಅಡ್ಕಿಸುವೆ. ಒಂದ್ ವಾರಂದ ಬಾಳೆಕಾರಿ ಉಪ್ಕರಿ ಮಾಡಿ ಮಾಡಿ ಬಿಡ್ದೋತ್. ಅಂಗಳ ಇಡೀ ಒರ್ತೆ ಎದ್ದ್ ಗೊದ್ದಂಗ ಮಿಜಿ ಮಿಜಿ ಕಂಡದೆ. ಈ ಸರ್ತಿ ಉಬರ್ ಅಂಗಳಕೇ ಹತ್ತುದೇನೋ!! ಇನ್ನ್ ಕರೆಂಟ್ ನ ಕತೆ ಹೇಳಿ ಸುಖ ಇಲ್ಲೆ.. ಮೊನ್ನೆ ನೆಡಿರ್ಲ್ ಒಮ್ಮೆ ಮಿಣ್ಕಿದಾಂಗಾತ್. ಬೆಂಗ್ಳೂರ್‌ಂದ ಹೈದ ಫೋನ್ ಮಾಡ್ರೆ ಮಾತಾಡಿಕೆ ಮೊಬೈಲ್ ಲಿ ಚಾರ್ಜ್ ಉಟ್ಟಾ?? ನಿನ್ನೆ ಮುಟ್ಟ ಒಂದ್ ಕುಟ್ಟಿಯಾರ್ ಇತ್ತ್. ಇಂದ್ ಅದೂ ಇಲ್ಲೆ.. ಸತ್ತೇ ಹೋಗುಟು. ನಿನ್ನೆ ಮನೆಕಡೆ ಬಂದ ತಿಮ್ಮ ಹೇಳ್ತ್. ಲಚ್ಚಣ್ಣನ ಮನೆಲಿ ಎಲ್ಲವೂ ಜನ್ರೇಟ್ಲಿ ಕರೆಂಟ್ ಬುಟ್ಟ್ ಮೊಬೈಲ್ ಚಾರ್ಜ್ ಮಾಡಿಕಂಡವೆಗಡ!! ಹಂಗೆ ಇದ್ಕೆ ಚೂರ್ ಮಾಡಿಕಣೊನೊತ ಹೊರ್ಟೆ. ಬೊಳ್ಪುಂದ ಚೂರ್ ಬೊಯಿಪು ನೋಡಿ ಕೊಡೆ ಬೇಡಾತ ಗ್ರೇಸಿ ಹೊರ್ಟದ್. ಚಾಕಟೆ ಮರಂದ ಇತ್ತ ಚೋಡಿ ಕರೆ ಪಾಲ ದಾಟ್ಯೊಳಷ್ಟೆ.. ಅಪ್ಪೊತ್ತಿಗೆ ಪುನಃ ಸುರಾತ್ ನೋಡಿ.. ಮಳೆ ಮಾರಿ ನಿಮ್ಮ ಬೇಲಿ ಕರೆಲಿದ್ದ ಮೂಂಡಿ ಕೆಸದ ದಂಟ್ ಮುರ್ದ್ ಹಿಡ್ಕಂಡ್ ಬಂದೆ.. ಬೊಯ್ಬಡಿ ಬಲರ್ಯಾ.. ಅಲ್ಲಾ ಚಿನ್ನಮಕ್ಕ.. ನಂಗೊಂದು ಸಂಸಯ.. ಈ ಮಳೆಗೂ ಏನಾರ್ ಉರ್ಚಟ ಹಿಡ್ದುಟಾ ಹೆಂಗೆ??! ತೋ... ಇದರ ಪಡೆ ಮುತ್ತಿಕೆ.." ಈ ನಮೂನೆ ಜಿರ್‌ಂಜಿಲ್ ಸುರಾದರೆ ತಿರ್ಗಿ ಜವಾಬು ಕೊಡಿಕಾರ್ ಪುರ್ಸೊತೆಲ್ಲ್ಯುಟ್ಟು ಚಿನ್ನಮ್ಮಕ್ಕಂಗೆ. ಅವು ನೀಲಮ್ಮಕ್ಕನ ಬಾಯಿ ನೋಡಿಯೇ ಬಾಕಿ!!

ಪುರ್ಸೊತಿಲ್ಲದೆ ಹೊಯಿತಿದ್ದ ನೀಲಮ್ಮಕ್ಕನ ಮಳೆ ಪುರಾಣಕ್ಕೆ ಅಡ್ಡ ಹಾಕಿದ್ ಅವರ ಚಪ್ಪಲ್!! ಹೆಂಗೆ ಗೊತ್ತುಟಾ? ತೊಳ್ಸಿಕಟ್ಟೆಂದ ಆಚೆ ಬುಟ್ಟ ಚಪ್ಪಲ್ ಮಳೆ ನೀರ್‌ಲಿ ಪಾಂಬಿಕಂಡ್ ಹೋತುಟ್ಟು. ಕರಿಕಪ್ಪು ಏಮೆನಾಂಗೆ ಕಂಡ ಚಪ್ಪಲ್‌ನ ಅಗ್ಯಕ್ಕೆ ಬೊಳ್ಳು ನಾಯಿ ಹೋದರ ಕಂಡ್, ತಿಂಟೆಂದ ತೊಬ್ಬಂತ ಹಾರಿ ನೀಲಮ್ಮಕ್ಕ ಚಪ್ಪಲ್ ತೆಗ್ದಿಸಿಕಂಡೊ. ಸಿಕ್ಕಿದ್ ಚಾನ್ಸ್ ತ ಚೆನ್ನಮ್ಮಕ್ಕನೂ "ನೀರ್ ಕೊದ್ದ್ ಆರ್ತೇನೋ.. ಚಾಯ ತನ್ನೆ!!" ತ ಮನೆ ಒಳಗೆ ಓಡ್ದವು ಬಾಕನ ಒಂದ್ ಕೀಂತ್ ಬಾಳ್ಲೆಲಿ ಸಜ್ಜಿಗೆನೂ ಹಿಡ್ಕಂಡೊಳೊ. "ಎಲ್ಲರ ಮನೆ ದೋಸೆ ತೂತಾದರೆ ನಮ್ಮಲಿ ಪುಂಡಿನೂ ತೂತಾಂಗುವಾಂಗೆ ಆಗುಟು ನೀಲಮ್ಮಕ್ಕ.. ಮನೆ ಹಿಂದೆ ಬರೆ ಜರ್ದ್ ನೀರ್ ನಿತ್ತ್ ಕಂಬಳ ಗದ್ದೆನಾಂಗಾಗುಟು. ಕಣಿ ಕೆರ್ದ್ ಕೊಡಿಕೆ ತಿಮ್ಮನ ಬಾಕೆ ಹೇಳ್ರೆ ಬನ್ನೆತೇಂಳ್ದಂವ ನಾಪತ್ತೆ. ಅಂವನ ಹುಲಿ ಹೊರಿಕೆ.. ಒಮ್ಮೆ ಬಂದರೆ ಕಳ್ದಿ ಬುಡಿ ಆತಾ.. ಬೇಸಾಯ ಮಾಡ್ದಂವ ಬೇಗ ಸಾಯಗಡ. ಈ ವರ್ಸ ಮಾತ್ರ ಕೊಮ್ಮುನ ನಂಬಿ ಕುದ್ದವೂ ಕೊಟ್ಟೆಕಾಯಿ ಕಟ್ಟಿದೊ!! ಕರೆಂಟ್ ಇಲ್ಲದೆ ನಂಗೂ ಸಜ್ಜಿಗೆ.. ಪದ್‌ಂಜಿ ಲೀ ದಿನ ಬೊಳ್ಪಾತುಟ್ಟು.. ತಕಣಿ ಈ ಸಜ್ಜಿಗೆ.. ಒಮ್ಮೆ ಮುಗ್ಸಿಬುಡಿ.. ಒಳ್ದರೆ ಮತ್ತೆ ಆ ನಾಯಿನೂ ತಿಂಬೊದ್ಲೆ... ಅದರ ಹಾಂಕರನೇ! ಇರಿ ನೀವ್ಗೆ ಒಂದ್ ಹಳೆ ಕೊಡೆ ಕೊಟ್ನೆ. ಕಡ್ಡಿ ನಾಕ್ ಮುರ್ದುಟು ಅಷ್ಟೆ. ಇನ್ನೊಮ್ಮೆ ಇತ್ತ ಬಾಕನ ತಂದ್ ಬುಡಿ ಮಾತ್ರ.. ಮಗಳೂ ಮೊನ್ನೆ ಮನೆಗೆ ಬನ್ನೆತ ಹೊರ್ಟ್ ಕಂಡಿತ್ತ್. ಈ ಮಳೆಗೆ ಬಂದರೆ ಎಂತ ಮಾಡ್ದು? ಕೂಸುನ ಉಚ್ಚೆ ಬಟ್ಟೆ ಒಗ್ದ್ ಒಣ್ಗಿಕೆ ಬೆಸೆಗ್ಯಡಿಲಿ ನೇಲ್ಸೊಕಷ್ಟೆ.. ಅದ್ಕೆ ನಾನೇ ಬೇಡಂತೇಳ್ದೆ. ಇರಿ ನಾ ಕೊಡೆ ತಂದ್ ಕೊಟ್ನೆ" ತ ಒಳೆಗೋದೋ. 'ಹಾಂಕರ' ತೇಳ್ದ್ ಇವ್ಕೆನಾ ನಾಯಿಗೆನಾತ ಸರಿ ಅರ್ಥ ಆಗದೆ ನೀಲಮ್ಮಕ್ಕ ಬೆಚ್ಚ ಬೆಚ್ಚ ಚಾಯನ ಬಾಯಿಗಿಸಿ ಲೋಟೆ ಕೊಡಿಂದ ಹೀಂಪಿಕೆ ಸುರು ಮಾಡ್ದೊ.

---

## ರಹೀಮನ ಚೇಷ್ಟೆ

**–ಕುಂಭುಗೌಡನ ಮುತ್ತಮ್ಮ**

ರಾಮ ಮತ್ತೆ ರಹೀಮ ಇಬ್ಬರೂ ಬಾಳ ಒಳ್ಳೆ ಗೆಳೆಯರ್, ರಾಮ ಬಳ ದೈವ ಭಕ್ತ, ಅವು ಇಬ್ಬರೂ ಒಟ್ಟಿಗೆ ಶಾಲೆಗೆ ಹೋದು, ಆಟ ಆಡ್ದು ಮಾಡ್ತಾ ಇದ್ದೊ. ಒಂದ್ ದಿನ ಇಬ್ಬರೂ ಶಾಲೆಗೆ ಹೋಕಾಕನ ದಾರಿಲಿ ಒಂದ್ ತುಳ್ಸಿ ಗಿಡ ಇತ್ತ್, ರಾಮ ಅದರ್ನ ಮುಟ್ಟಿ ನಮಸ್ಕಾರ ಮಾಡಿಕಣ್ತ್. ರಹೀಮಂಗೆ ಏನಾತೋ ಗೊತ್ಲೆ.. ಆ ತುಳ್ಸಿ ಗಿಡನ ಕಿತ್ತ್ ಮೈಗೆ ಪೂಜಿಕಣ್ತ್. ರಾಮಂಗೆ ಬಾಳ ಬೇಜಾರ್ ಆತ್. ತುಳ್ಸಿ ಗಿಡನ ನಾವ್ ಲಕ್ಷ್ಮಿ ತ ಪೂಜಿಸುದು. ಇಂವ ಹಿಂಗೆ ಮಾಡ್ತಲಾ ತ ಬೇಜಾರ್ ಆದರೂ ಸುಮ್ಮನಾತ್. ಹಂಗೆ ಮುಂದೆ ಹೋಕನ ಅಲ್ಲೇ ಕರೆಲಿ ಒಂದು ಅಂಗರೆ ಗಿಡ ಕಂಡತ್. ಕಲ್ಸಿನೆ ಇವಂಗೆ ತೇಳಿ ಆ ಗಿಡಕ್ಕೂ ಹೋಗಿ ನಮಸ್ಕಾರ ಮಾಡಿ ಬಾತ್, ರಹೀಮ ಆಗಲೇ ಮಾಡ್ದಂಗೆ ಹೋಗಿ ಆ ಗಿಡನೂ ಕಿತ್ತ್ ಮೈಗೆಲ್ಲಾ ಪೂಜಿಕಣ್ತ್. ಪೂಜಿದಂಗೆ ನೋಡಿ ದೆವ್ವ ಬಂದಂಗೆ ಕೊಣ್ಯಕೆ ಸುರು ಮಾಡ್ತ್. ಮೈ ತೀರ ತುರ್ಸಿಕೆ ಸುರು ಆತ್. ಕಣ್ಣ್‌ಲಿ ನೀರ್ ತುಂಬಿಕಂಡ್ ಮೈ ತೀರ ತೊರ್ಸ್‌ತಾ ಇತ್ತ್. ಅಂವನ ಕಷ್ಟ ನೋಡಿಕಾಗದೆ ರಾಮ ಮನೆಗೆ ಹೋಗಿ ಮೈಗೆ ಎಣ್ಣೆ ತಿಕ್ಯ ತೇಳಿ ಹೇಳ್ತ್. ಜೀವ ಉಳ್ದರೆ ಸಾಕ್ ತ ರಹೀಮ ಮನೆಗೆ ಓಡಿ ಮೈ ತೀರ ಎಣ್ಣೆ ಪೂಜಿ ಮೀದಾಕನ ತೊರ್ಸುದು ಕಮ್ಮಿ ಆತ್. ಅಲ್ಲಿಂದ ಮೇಲೆ ರಹೀಮ ಇಂತ ಚೇಷ್ಟೆಗಳ ಬುಟ್ಟತ್.

## ಏನ್ ಹೇಳ್ರೆ ಸಣಪಾ.....?

-ಹೊಸೊಳಿಕೆ ಯೋಗೀಶ್

ಏನ್ ಹೇಳ್ರೆ ಸಣಪಾ
ವಿಷಯ ಕೆಳ್‌ಕನಾ ಉಟ್ಟಲ್ಲಾ
ತಲೆಗೆ ಮರ ಬಿದ್ದಾಂಗೆ ಆದೆ

ಭತ್ತ ತಿಂಬಕ್ಕೆ ಬಾವ ಗಿಳಿ,ಹೊಟ್ಟ ಕೊಂರ್ಗುಗ
ಏಮೆ,ಎಲಿ ಹೆಗ್ಗಣಗ
ಕಟ್ಟ ಪುಣಿಲ್ಲಿ ನಡೆಕನ
ಕಾಂಬ ಉಜಿರ್ ಕಣಿಗ

ತೆನೆ ಹೊತ್ತ ಹಸುರು ಪೈರ್‌ಗ
ಬೊಳ್ಪಾಕನ ಗದ್ದೆಲಿ ಹತ್ತಿಪ್ಪತ್ತು ಹೆಣ್ಣ್ ಮಕ್ಕ
ನೇಜಿ ನೆಡುಕನ ಕೊಯ್ಯೆಕನ
ಆ ಬಾಯಿಂದ ಬೀಳುವ ಪೊದ್ದಗ
ಅದರ ಪೊರ್ಲುನೇ ಬೇರೆ ಸಣಪಾ....!

ಹೆಂಣ್ ಮಕ್ಕಳ ಮಾತ್ ಕತೆ ನೆಗೆ
ಜಾತ್ರೆನೇ ಗದ್ದೆ ಗೋರಿಲ್ಲಿ ನಡೆತಿತ್ತು
ಉಂಬಕೆ ಬಾಕನ ಹಲ್ಸ್‌ನ ಹಣ್ಣ್‌ನ ಕೊಯ್ದು ಇಸಿ
ಗಂಜಿಂದ ಜಾಸ್ತಿ ತೆಳಿನೇ ಕುಡ್ಯೆಕೆ ಕೊಡ್ದುಗಡ
ಈಗನಾಂಗೆ ಕತ್ತಲೆ ಆಕನ ಸಂಬಳ ಉಟ್ಟಯಾ ಸಣಪಾ....!

ಗದ್ದೆ ಕೆಲ್ಸ ಮುಗ್ಸಿ  ಭತ್ತ ಮಿದ್ದ್
ಒಂದು ಮುಡಿ ಎರಡ್ ಮುಡಿ ಅಕ್ಕಿ ಹೊರುತ್ತಿದ್ದೋ
ಈಗ ಗದ್ದೆಲಿ ಅಡ್ಕೆ ದೈಗ, ಗುಡ್ಡೆಲಿ ರಬ್ಬರ್ ಮರಗ
ಹೊಟ್ಟೆಗೆ ತಿಂಬ ತಿಂಡಿ ತಿನ್ನುಸುಗೆ
ಅಂಗುಡಿ ಮೆಟ್ಟುಕಲ್ ಹತ್ತುವೆಯಾ ಸಣಪಾ....!

ಮಣ್ಣ್‌ಲಿ ಮೈ ಬೊಗ್ಗುಸಿ ಗೈಯೇವಿಲ್ಲೆ
ಇದ್ದೋವು ಸಂಬಳದೊಟ್ಟಿಗೆ ಕುಡೆಕೆ ಕೇಳುವೆ
ಹಿಂಗೆ ಆದರೆ ಮುಂದೆ ಹೇಂಗೆ ಸಣಪಾ....?
ವಿಷಯ ಕೇಳುಕನಾ ಉಟ್ಟಲ್ಲ
ತಲೆಗೆ ಮರ ಬಿದ್ದಾಂಗೆ ಆದೆ....!

## ಗೂಡೆನ ನೋಡಿ ಬಂದ ಮೇಲೆ ಅಣ್ಣ ತಂಗೆನ ಕೇಳ್ದೆ....

**-ಎಂ.ಜಿ. ಕಾವೇರಮ್ಮ**

ಅಣ್ಣ- ಹೇಳ್‌ನೆ ತಂಗೆ ಗೂಡೆ ಹೇಂಗುಟ್ಟು
ಸರ್ಯಾಗಿ ನೋಡ್ಯಳನಾ?
ತಂಗೆ- ಉದ್ದನೆ ಕೂದಲ್
ದುಂಬಿನ ಕಣ್ಣ್‌ಗ
ಬಣ್ಣಲಿ ಪೊರ್ಲುಟ್ಟು.
ಅಣ್ಣ- ನಡ್ಗೆಲಿ ಹೇಂಗೇ
ನುಡಿದರ್ಲಿ ಹೇಂಗೇ
ಎಲ್ಲನ ತಿಳ್ದಳನೋ?
ತಂಗೆ- ಸೊಂಟನ ಬೊಳ್ಕಿಸಿ
ಕುಂಡೆನ ತಿರ್ಗಿಸಿ
ಬಾಥ್‌ನ ಹಾಂಗೆ ನಡ್ಯತಿತ್ತ್.
ಕೋಗಿಲೆ ದನಿನ ಮಾತ್‌ನ ಕೇಳಿ
ನಂಗೇನೊ ಕುಸಿ ಆತ್.
ಅಣ್ಣ- ಅಡ್ಗೆಲಿ ಬಿರ್ಸತಿ ಮನರಾನು ಕಲ್ತುಟ್ಟು
ಯಾವ್ದರ್ಲು ಕೊರ್ತೆ ಇಲ್ಲೆ,
ಕೆಲ್ಸಲಿ ಜಾಣೇಂತ ಅದರಪ್ಪ ಹೇಳ್ಯೊಳೊ.
ನೀ ಚಿಂತೆ ಮಾಡ್ಬಡ.
ಯಾಕಣ್ಣ ಕೇಳಿತ ಗೂಡೆನ ನೋಡಿಕನ
ಕಣ್ಮುಚ್ಚಿ ಕುದ್ದಳನೋ?
ಅಣ್ಣ- ಹೆಣ್ಣ್‌ನ ಗುಣನಾ ಹೆಣ್ಮಕ್ಕ ತಿಳ್ದಾವೆ.
ನಂಗದ್ ಗೊತ್ತಾಲೆ.
ಗೂಡೆನ ಪೊರ್ಲುಲಿ
ಎಲ್ಲನು ಮರ್ತೋಂದೆ
ಅದ್ಕೇಂತ ನಿನ್ನ ಕೇಳ್ದೆ.

ನಮ್ಮ ಪತ್ರಿಕೆಗೆ ಕತೆ, ಕವನ, ಹನಿಗವನ, ಚುಟುಕು, ಲೇಖನ, ಅನುಭವ ಕಥನ, ಪ್ರವಾಸ ಕಥನ ಹಂಗೆ ಪತ್ರಿಕೆ ಬಗ್ಗೆ ನಿಮ್ಮ ಅನ್ಸಿಕೆ ಅಭಿಪ್ರಾಯ ಗಳ್ನ ಬರೆಯವು ಸಂಪೂರ್ಣ ಅರೆಬಾಸೆಲಿ ಬರ್ದ್

**ಅರೆಬಾಸೆ ಮುಡ್ಪು ಪತ್ರಿಕೆ**
C/o ವಸಂತ ಟ್ರೇಡರ್ಸ್
ಬೈಪಾಸ್ ರಸ್ತೆ
ಗೋಣಿಕೊಪ್ಪ -571213
ವಾಟ್ಸಾಪ್‌ಲಿ ಕಳ್ಸಿರೆ: 9535615759
ಮಿಂಚಂಚೆಲಿ ಕಳ್ಸಿರೆ: **arebasepatrike@gmail.com** ಗೆ ಕಳ್ಸಿ ಕೊಡಿ.

# ಸಂಪಾಜೆ ಕಣಿವೆ

–ಕೀ.ಬಾ.ರ

ಕರ್ನಾಟಕ ರಾಜ ಪರಂಪರೆ ಮೈಸೂರ್‌ಂದ ಮಡಿಕೇರಿ ಸೇರಿಕಂಡ್ ಕರಾವಳಿಯ ಬಂದರು, ಕಾಸರಗೋಡಿನ ಮಧೂರು, ಕೊಲ್ಲೂರು, ಉಡುಪಿ ಕೃಷ್ಣ ಮಠ, ಮಣಿಪಾಲ, ಕಾರ್ಕಳ, ಮೂಡಬಿದರೆ, ವೇಣೂರು, ಧರ್ಮಸ್ಥಳ, ಕುಕ್ಕೆ ಸುಬ್ರಮಣ್ಯದ ಹಿಂದೂ, ಜೈನ ಬಸದಿಗ, ಕ್ರಿಶ್ಚಿಯನ್ ಇಗರ್ಜಿಗ ಮತ್ತೆ ಮುಸ್ಲಿಂ ದರ್ಗಾ (ಸೈಯದ್ ಮದನಿ) ಮುಂತಾದ ಪವಿತ್ರ ಕ್ಷೇತ್ರಗಳಿಗೆ ಹೋಕನ ತಿರುವುಗಳ್‌ಂದ ಕೂಡಿದ್ದ್ ಸುತ್ತಲೂ ಹಸ್ರ್‌ಂದ ಕಂಗೊಳಿಸುವ, ಎರಡ್ ಕಡೆಗಳ್ಲಿ ಧುಮುಕುವ ತಿಳಿ ನೀರ್‍ನ ಗಂಗಾವತರಣ ಇಳಿ ಪ್ರದೇಶದ ಪವಿತ್ರ ತಾಣನೇ ಸಂಪಾಜೆ ಕಣಿವೆ. ಸಮುದ್ರ ಮಟ್ಟಂದ 500 ಅಡಿಂದ 3600 ಅಡಿವರೆಗೆ ಈ ಕಣಿವೆನ ಪರ್ವತ ಸಾಲ್ ಹರ್ಡಿಯುಟ್ಟು

ಸಂಯುಕ್ತ ರಾಷ್ಟ್ರವೂ ಸಂಪಾಜೆ ಕಣಿವೆನ ಬೇರೆ ಬೇರೆ ಸಸ್ಯ ಹಂಗೆ ಪ್ರಾಣಿ ಸಂಕುಲದ ಸೂಕ್ಷ್ಮ ಪರಿಸರ ವಲಯ ಪಾರಂಪರಿಕ ಜಾಗೆ ತ ಗುರ್ತಿಸಿಯೊಳೊ (ಹಾಟ್ ಸ್ಪಾಟ್ ಬಯೋ ಡೈವರ್‌ಸಿಟಿ). ಆರ್ಯುವೇದ ಪಂಡಿತರ್, ಸಸ್ಯ ಶಾಸ್ತ್ರ/ ಪ್ರಾಣಿ ಶಾಸ್ತ್ರ ಅಧ್ಯಯನಕಾರರ್, ಚಾರಣಿಗರ್ ಹೆಚ್ಚಿನ ಸಂಖ್ಯೆಲಿ ಈ ಕಣಿವೆನ ಸಂದರ್ಶಿಸುವೆ. ಇವ್ಕೆ ಬೇಕಾದ ಹೆಚ್ಚಿನ ಮಾಹಿತಿನ ಕೊಯನಾಡ್‌ಲಿ ಇರುವ ಅರಣ್ಯ ಇಲಾಖೆ ಕಚೇರಿ ಒದಗಿಸಿದೆ.

ಜಾನಪದ ಕಲೆಗಳಾದ ಯಕ್ಷಗಾನ/ ಬಯಲಾಟ, ತಾಳ ಮದ್ದಳೆಗೆ ಹೆಚ್ಚ್‌ನ ಮಾನ್ಯತೆ ಇದ್ದ್ ಯಕ್ಷಗಾನ ಕ್ಷೇತ್ರಕ್ಕೆ ಬಾಳಷ್ಟ್ ಕಲಾವಿದರ್‌ನ ಕೊಟ್ಟುಟು ಈ ಸಂಪಾಜೆ. ಪರಂಪರೆಯ ರಾಮ ಭಜನಾ ಮಂದಿರ ಸ ಇಲ್ಲಿ ಉಟ್ಟು. ಕನ್ನಡ ಆಡಳಿತ ಭಾಷೆ ಆದರೂ ತುಳು ಹಂಗೆ ಅರೆಭಾಷೆ ಇಲ್ಲಿನ ವ್ಯಾವಹಾರಿಕ ಭಾಷೆ. ಎಲ್ಲ ವ್ಯಾಪಾರಸ್ಥರ್‌ಗೆ ಸ ಈ ಭಾಷೆಗ ಗೊತ್ತುಟು. ದಬ್ಬಡ್ಕ, ಸಂಪಾಜೆ, ಕಡಮಕಲ್, ಮೊಣ್ಣಂಗೇರಿ ಕಡೆ ಕಾದಿಟ್ಟ ಅರಣ್ಯ ಪ್ರದೇಶದ ಕೂಪುಗಳ್ಲಿ ಮತ್ತೆ ಗೇಣಿ ಮಲೆಗಳ್ಲಿ ಮರ ತೆಗೆವ ಸಮಯಲಿ ಬಂದ್ ನೆಲೆ ನಿಂತ ಅನೇಕ ಯುವ ಬ್ಯಾರಿ ಮತ್ತೆ ಮುಸ್ಲಿಂ ಭಾಂದವ್ ಈಗ ಅಡಕೆ, ತೆಂಗು, ಕಾಳ್ ಮೆಣ್ಸ್, ರಬ್ಬರ್ ಮೊದಲಾದ ವ್ಯಾಪಾರಗಳ್ನ ಮಾಡಿಕಂಡ್ ತಮ್ಮ ಅನುಕೂಲತೆಗಾಗಿ ಮಸೀದಿ, ಮದರಸಗಳ್ನ ಕಟ್ಟಕಂಡ್ ದೇವರಕೊಲ್ಲಿ, ಕೊಯನಾಡು, ಗಡಿಕಲ್ಲು, ಕಲ್ಲುಗುಂಡಿ ತೇಳೊ ಜಾಗೆಲಿ ನೆಲೆಸಿಯೊಳೊ. ಕೀಲಾರು ಗೋಪಾಲಕೃಷ್ಣ ಪ್ರತಿಷ್ಠಾನ ತೇಳೋ ಖಾಸಗಿ ದತ್ತಿ ಸಂಸ್ಥೆ ಯಕ್ಷ ಕಲೆಗೆ ಪ್ರೋತ್ಸಾಹ ನೀಡುತ್ತಾ ಬಂದಿದ್ದ್ ಪ್ರತಿ ವರ್ಷ ತೆಂಕು ತಿಟ್ಟು, ಬಡಗು ತಿಟ್ಟು ಸಂಪ್ರದಾಯದ ಜೋಡು ಮೇಳಗಳ್ನ ನಡ್ಸಿಕಂಡ್ ಬಂದೊಳೊ. ಈ ಪ್ರತಿಷ್ಠಾನವು ಗ್ರಾಮೀಣ ಯುವ ವೃಂದಕ್ಕೆ ವಿದ್ಯಾ ಸಹಾಯ ನೀಡುತ್ತಿದ್ದು ಎಷ್ಟೋ ಯುವ ಪ್ರತಿಭೆಯ ಉತ್ತಮ ಜೀವನಕ್ಕೆ ಸಹಕಾರಿ ಆವ್ವು.

ಬ್ರಿಟಿಷರ ಕಾಲಲಿ ಅಂದ್‌ನ ಕೊಡಗ್ ರಾಜ್ಯ ಸರಕಾರ ದೇವರ ಕೊಲ್ಲಿ ಮತ್ತೆ ಕೊಯನಾಡ್‌ಲಿ ಹರ್ಡಿರುವ ಕಾಡ್ ಜಾಗೆನ 99 ವರ್ಷದ ವರೆಗೆ ದೀರ್ಘ ಕಾಲಕೆ ಗುತ್ತಿಗೆ ಮೇಲೆ ಕಂಪೆನಿಗಳಿಗೆ ಕೊಟ್ಟಂಗೆ ಈ ಕಣಿವೆಗೆ ಸುರುಗೆ ರಬ್ಬರ್ ಕೃಷಿ ಬಾತ್. ಹಂಗೆ ಬಂದ ಬ್ರಿಟಿಷರ್ ಅವರ ಅನುಕೂಲಕೆ ಸುಳ್ಯಂದ ಅರಂತೋಡು– ಸಂಪಾಜೆ– ಊರುಬೈಲು ಮಾರ್ಗಂದ ಕೊಯನಾಡ್ ವರೆಗೆ 20 ಕಿ.ಮೀ ದೂರದ 11 ಕೆ.ವಿ ಸಬ್ ಟ್ರಾನ್ಸ್ಮಿಷನ್ ಲೈನ್ (ವಿದ್ಯುತ್ ವಾಹಕ) ನ 1970 ರ್‍ಲಿ ಎಳ್ದೊ.

ರಾಮಾಯಣಲಿ ಉಲ್ಲೇಖಿಸಿದ ಸಂಪಾತಿ ಕ್ಷೇತ್ರ ಇದೇ ಜಾಗೆ. ಋಷಿ ಮುನಿಗ ತಪಸ್ಸ್ ಮಾಡ್ದ ಪವಿತ್ರ ಜಾಗೆ. ಕಣ್ವ ಮಹರ್ಷಿಗ ಯಜ್ಞ ಮಾಡ್ದ ಮತ್ಸ್ಯ ತೀರ್ಥದ ಶಿವ ಕ್ಷೇತ್ರ ಇದ್. ಸುಬ್ರಮಣ್ಯಂದ ಮಡಪ್ಪಾಡಿಗಾಗಿ ಆನೆಗ ಶತಮಾನಗಳ್‌ಂದ ಹಾದು ಹೋದ ಆನೆಗಳ ಜಾಡ್ ಈ ಕಣಿವೆ. ಪರಶು ಕ್ಷೇತ್ರಂದ ಸುರು ಆಗಿ ಪಂಚಲಿಂಗೇಶ್ವರ, ಮಲ್ಲಿಕಾರ್ಜುನ, ಅರೆಕಲ್ಲು ಅಯ್ಯಪ್ಪನ ಪವಿತ್ರ ಕ್ಷೇತ್ರ ಇದ್. ಇಲ್ಲಿ ಬಂದ್ ನೆಲೆ ನಿಂತ ರೈತ ಬಾಂಧವ್ ಅವರೊಟ್ಟಿಗೆ ತಂದ ಶಿರಾಡಿ ಭೂತ, ಪಂಜುರ್ಲಿ, ವಿಷ್ಣುಮೂರ್ತಿ, ಕಲ್ಲುರ್ಟಿ, ಗುಳಿಗ ಸೇರ್ದಂಗೆ ಇನ್ನಷ್ಟ್ ದೈವಗಳ ಆರಾಧನಾ ಜಾಗೆ ಈ ಕಣಿವೆ.

ಅಕ್ಷಾಂಶ 12'30"–12'32" (ಉ) ಮತ್ತೆ ರೇಖಾಂಶ 75'30"–75'33" ರ ನಡುಲಿ 140 ರ್‌ಂದ 500 ಮೀಟರ್ ವರೆಗೆ ಕಣಿವೆಲಿ ಜೂನ್‌ಂದ ಅಕ್ಟೋಬರ್ ತಿಂಗಳ ವರೆಗೆ ವಾರ್ಷಿಕ ಸರಾಸರಿ 120–140 ಇಂಚ್ ಮಳೆ ಆದೆ. ಫಲವತ್ತಾದ ಕೆಂಪು ಮಿಶ್ರಿತ ಕಪ್ಪು ಮಣ್ಣ್ ಕೃಷಿಗೆ ಹೇಳಿ ಮಾಡ್ಸಿದಂಗೆ ಉಟ್ಟು. ಮಡಿಕೇರಿಂದ ಸುರು ಆಗಿ ಮದೆನಾಡ್,

ಬೆಟ್ಟತ್ತೂರು, ಮೊಣ್ಣಂಗೇರಿಯ ಬೆಟ್ಟಗಳ ಸೀಳ್‌ಗಲ್ಲಿ ಹರಿವ ಬೇರೆ ಬೇರೆ ಸಣ್ಣ ಸಣ್ಣ ಝರಿಗ ಮುಂದೆ ಪಯಸ್ವಿನಿಯಾಗಿ ಕಡೆಗೆ ಚಂದ್ರಗಿರಿಯಾಗಿ ಅರಬ್ಬಿ ಸಮುದ್ರನ ಸೇರ್‍ದೆ.

ಸುಮಾರ್ 10ನೇ ಶತಮಾನಂದ 16ನೇ ಶತಮಾನದ ವರೆಗೆ ಬೇರೆ ಬೇರೆ ಕನ್ನಡದ ಆಳ್ವಿಕೆಕಾರರಾದ ರಾಷ್ಟ್ರಕೂಟ, ಕದಂಬ, ಗಂಗ, ಹೊಯ್ಸಳರ ಆಳ್ವಿಕೆಲಿ ಇತ್ತ್. ಹಿಂಗಿದ್ದರೂ ತನ್ನ ಮೂಲ ಸ್ವರೂಪನ ಉಳ್ಸಿಕಂಡ್ ಬಂದುಟು ಈ ಹಸ್ರ ಕಣಿವೆ. 1600 ರ್‌ಂದ 1834 ರ ವರೆಗೆ ಕೊಡಗ್‌ಂದ ಹಾಲೇರಿ ಅರಸರ ಆಳ್ವಿಕೆಗೆ ಒಳಪಟ್ಟ್ ಅರಣ್ಯ ಪ್ರದೇಶ ಆಗಿತ್ತ್. ಇಲ್ಲಿನ ಸುಮಾರ್ ದೊಡ್ಡ ಹಿಡುವಳಿದಾರರ್ ರಾಜರ್‌ಗೆ ಭತ್ತ, ತೆಂಗು, ಅಡಿಕೆ, ಕಾಳ್ ಮೆಣ್ಸ್ ಹಿಂಗೆ ಬೇರೆ ಬೇರೆ ಪದಾರ್ಥಗಳ್ನ ಕೊಡ್ತಾ ಬಂದಿದ್ದ್ ಜಮ್ಮ ಜಾಗೀರ್‌ಗಳ್ನ ಪಡ್ಕಂಡೊಳೊ. ಸಂಪಾಜೆ, ಮರಿಕೆ, ಆನೆ ಮಲ್ಲಡ್ಕ, ಕೈಪಡ್ಕ, ಬಾಚಿಗದ್ದೆ, ಕೀಲಾರು, ಕುಯಿಂತೋಡು, ಬೈಲೆ, ಹಾರಂಬಿ, ನಡುಬೆಟ್ಟು, ಕೂಡಡ್ಕ, ಆನೆಹಳ್ಳ, ಊರುಬೈಲು ಮೊದಲಾದ ಬಯಲ್‌ಗಳಿದ್ದ್ ಜಮೀನ್ದಾರರ್‌ಂದ ಗೇಣಿ ಮೂಲಕ ಮತ್ತೆ ನೇರವಾಗಿ ವ್ಯವಸಾಯ ಮಾಡಿಕಂಡ್ ಬರ್ತಾ ಇದ್ದೊ. ಮಣಿಯಾಣಿ, ಪೂಜಾರಿ, ಶೇರಿಗಾರ, ಗೌಡ, ಬಿಲ್ಲವ, ಬಂಟ ಹಿಂಗೆ ಒಕ್ಕಲು ಕೃಷಿಕರ್ ಪಡ್ಪುಗಲ್ಲಿ ವಾಸ ಮಾಡ್ತಾ ಇದ್ದೊ. ಮುಳಿ ಹುಲ್ಲ್‌ನ ಮನೆಗ ಇದ್ದೊ. ಕಾಡುಗಲ್ಲಿ ಕುಡಿಯರ್, ಗೊಲ್ಲರ್ ವಾಸಮಾಡಿಕಂಡ್ ಇದ್ದೊ. ಕೃಷಿ ಸಹಾಯಕ್ಕೆ ಚೊಕ್ಕಾಡಿ, ಅಜ್ಜಾವರ ಮೊದಲಾದ ದಕ್ಷಿಣ ಕನ್ನಡದ ಮೂಲಗಳ್‌ಂದ ಬಂದ್ ನೆಲಸಿದ ತುಳು ಬಾಶಿಕ ಅಡಿಯ, ಪಾಲೆ, ಮಾಯಿಲ, ಮೇರ ಕುಟುಂಬ ಗಳಿದ್ದೊ.

1837 ಅಮರ ಸುಳ್ಯ ದಂಗೆ ನಂತರ ಸಂಪಾಜೆಯ ಒಂದ್ ಭಾಗ ಉಪ್ಪಿನಂಗಡಿ ತಾಲೂಕ್‌ನ ಭಾಗವಾಗಿ ದಕ್ಷಿಣ ಕನ್ನಡಲಿ ವಿಲೀನ ಆಗಿ ಮದರಾಸಿನ ಬ್ರಿಟಿಷ್ ಗವರ್ನರ್ ಆಡಳಿತಕ್ಕೆ ಒಳಪಟ್ಟತ್. ಸಂಪಾಜೆಯ ಒಂದು ಭಾಗ ಪ್ರೊಹಿಬಿಷನ್ ಗೇಟ್, ಒನ್ನೊಂದೆಡೆ ಕೊಡಗು 'ಸಿ' ರಾಜ್ಯದ ಗಡಿ ಪೊಲೀಸ್ ಗಡೆ ಗೇಟ್ ಗಡಿ ಪ್ರದೇಶವಾದ ಕಾರಣ 1914–18 ಮತ್ತೆ 1939–45 ರ್ಲಿ ರೇಷನ್ ನ ತೊಂದರೆಗಳ್ನ ಅನುಭವಿಸುಟ್ಟು ಈ ಸಂಪಾಜೆ ಕಣಿವೆ. ಕೊಡಗ್ ಭಾಗದ ಸಂಪಾಜೆಯ ಸುತ್ತಲಿನ ಮೊಣ್ಣಂಗೇರಿ, ಜೋಡುಪಾಲ, ಬೆಟ್ಟತ್ತೂರು, ಊರುಬೈಲ್, ಚೆಂಬು, ಪೆರಾಜೆ ಗಳೊಟ್ಟಿಗೆ ಸಂಪಾಜೆ ನಾಡ್ ಮಡಿಕೇರಿ ತಾಲೂಕ್‌ನ ಭಾಗ ಆವ್ಥ. 1947ರ ನಂತರ ಅಂದಿನ ಜಮೀನ್ದಾರ್ ಪಟೇಲ್ ನಂಜನ ಶ್ರೀ ಸಣ್ಣಯ್ಯ ನವರ ನೇತೃತ್ವಲಿ ಸಂಪಾಜೆ(ಕೊ) ಪ್ರಾಥಮಿಕ ಶಾಲೆ, ಸುಸಜ್ಜಿತ ಆಸ್ಪತ್ರೆ (ಪ್ರಾಥಮಿಕ ಆರೋಗ್ಯ ಕೇಂದ್ರ), ಪೋಸ್ಟ್ ಆಫೀಸ್, ದನದ ಆಸ್ಪತ್ರೆಗ ತಲೆ ಎತ್ತಿತ್.

1931 ರ್ಲಿ ಜಮೀನ್ದಾರ್ ಪಟೇಲ್ ಕೀಲಾರು ರಾಮಚಂದ್ರಯ್ಯನವರ ನೇತೃತ್ವಲಿ ಪುತ್ತೂರ್‌ಂದ ಸಂಪಾಜೆವರೆಗೆ 'ಶಾರದಾ ಮೋಟಾರ್ ಸರ್ವಿಸ್' ತೇಳೋ ಸಾರ್ವಜನಿಕ ಸಾರಿಗೆ ಸುರು ಮಾಡ್ದೊ. ಮಡಿಕೇರಿಂದ ಬರುವ ಬಸ್‌ಗ ಗೇಟ್‌ವರೆಗೆ ಮಾತ್ರ ಬಂದ್ ಅಲ್ಲಿಂದ ಮುಂದಕೆ ಬೇರೆ ಬಸ್‌ಲಿ ಹೋಕಿತ್ತ್. ಪ್ರಯಾಣೀಕರ ಅನುಕೂಲಕ್ಕೆ ತೇಳಿ ಹೋಟೆಲ್, ಸೋಡಾ ಅಂಗಡಿ, ಬಂಡಸಾಲೆಗಳಿದ್ದ್ ಚೌಕಿ ತೇಳೊ ಜಾಗೆ ಆತ್. ಶೆಟ್ಟಿ ಮೋಟಾರ್, ಮಿಸ್ಕಿತ್ ಮೋಟಾರ್, ಸ್ವಾಮಿ ಬಸ್, ಸಿ.ಪಿ.ಸಿ, ಶಂಕರ್ ವಿಠ್ಠಲ್ ಮೊದಲಾದ ಖಾಸಗಿ ಬಸ್‌ಗ ಇದ್ದೊ. ಕಲ್ಲುಗುಂಡಿಲಿ ಭಜನಾ ಮಂದಿರ ಆತ್, 1914 ರ್ಲಿ ಪ್ರಾಥಮಿಕ ಶಾಲೆ ಸುರು ಆತ್.

ಸಂಪಾಜೆ ಕಣಿವೆ ಸಂಪಾಜೆ ಆರ್.ಎಫ್, ಮೊಣ್ಣಂಗೇರಿ ಆರ್.ಎಫ್, ಕಡಮಕಲ್ ಆರ್.ಎಫ್ ತೇಳೋ ಕಾದಿಟ್ಟ ಅರಣ್ಯಗಳ್‌ಂದ ಆವೃತ ಆದ ದಟ್ಟ ಕಾಡ್‌ಗ ಇದ್. ಬಿದಿರ್, ಬೆತ್ತ, ಔಷಧೀಯ ಗಿಡಗ, ವನ್ಯ ಸಂಪತ್ತ್‌ಗೆ ಹೆಸ್ರ್‌ವಾಸಿಯಾಗಿದ್ದ್. ವನ್ಯ ಮೃಗಗಳ ತಾಣ ಆಗಿತ್ತ್. ವನ್ಯ ಮೃಗಗಳ ತಾಣ ಆಗಿತ್ತ್. ನೀರ್‌ನ ಹುಡ್ಕಿಕಂಡ್ ಉತ್ತರಂದ ಬಂದ ಕೃಷಿ ಕುಟುಂಬದವ್ ಇಲ್ಲಿ ಬೀಡ್ ಬಿಟ್ಟ್. ಬಿಡಾರ ಹೂಡಿ ನೆಲೆ ನಿಂತೊ.

ಹಳದಿ ರೋಗದ ಕಾರಣ ಪರಂಪರೆಯ ಅಡಿಕೆ  ಮತ್ತೆ ಗೇರು ಕೃಷಿಗ ಬದಲಾಗಿ ಸುಮಾರ್ ಮೂರು ದಶಕಗಳ ಹಿಂದೆ ರಬ್ಬರ್ ಬೋರ್ಡ್ ಸಹಾಯಂದ ಸಂಪಾಜೆ ಕಣಿವೆಯ ಕೃಷಿಕರ್ ರಬ್ಬರ್‌ಗೆ ಬದಲಾಕೆ ಸುರು ಮಾಡ್ದೊ. ಈ ಕೃಷಿಗೆ ತಾಂತ್ರಿಕ ಸಹಾಯಕ್ಕಾಗಿ ಹಂಗೆ ನರ್ಸರಿ (ಗಿಡಗಳ) ಪೂರೈಕೆಗಾಗಿ ಕೊಟ್ಟಾಯಂ–ಕಾಂಜರಪಲ್ಲಿ ಸುತ್ತಮುತ್ತಲ್‌ನ ಅನೇಕ ಕೇರಳದ ಕುಟುಂಬಗ ಇಲ್ಲಿ ಬಂದ್ ನೆಲೆ ನಿಂತೊ.

ಹಿಂಗೆ ಇಂದ್ ಸಂಪಾಜೆ ಕಣಿವೆ ಎಲ್ಲಾ ತರದ ಆಚಾರವಿಚಾರ ಸಂಪ್ರದಾಯನ ತನ್ನೊಳಗೆ ಇಟ್ಟಕಂಡ್ ಉಟ್ಟು.

## ನಮ್ಮೊಳಗಿನ ಸಾಧಕರು

### ಸಾಮಾಜಿಕ ಕಾರ್ಯಕರ್ತ ದಿನೇಶ್ ಹಾಲೆಮಜಲು

**–ಹೊಸೊಳಿಕೆ ಯೋಗೀಶ್**



ಸುಳ್ಯ ತಾಲೂಕು ನಾಲ್ಕೂರು ಗ್ರಾಮದ ಹಾಲೆಮಜಲು ಯು.ಡಿ ಮಂಜುನಾಥ ಗೌಡ ಮತ್ತೆ ಭೂವನೇಶ್ವರಿ ಅವರ ಮಂಜ ದಿನೇಶ್ ಹಾಲೆಮಜಲು. ಮರದ ಕೆಲ್ಸಂದ ಉದ್ಯೋಗ ಸುರು ಮಾಡ್ದ ಇವು ಹರಿಹರಲಿ ಪೆಟ್ಟಿಗೆ ಅಂಗಡಿ ಸುರುಮಾಡಿ ವ್ಯಾಪಾರಕ್ಕೆ ಇಳ್ದವೆ, ಪತ್ರಿಕಾ ವರದಿಗಾರನಾಗಿ ದುಡ್ದವೆ. ಅಲ್ಲಿನ ಜನಗಳೊಟ್ಟಿಗೆ ಸೇರಿ ಬೇರೆ ಬೇರೆ ಸಂಘ ಸಂಸ್ಥೆಗಳ್ಲಿ ಕೆಲ್ಸ ಮಾಡಿ ಇಂದ್ ಸಂಘಟಕರಾಗಿ, ಸಾಮಾಜಿಕ ಕಾರ್ಯಕರ್ತನಾಗಿ, ಪತ್ರಿಕಾ ವರದಿಗಾರನಾಗಿ ಹಂಗೆನೆ ಅರೆಬಾಸೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿ ಸದಸ್ಯರಾಗಿರುವ ಇವರ ಸಾಧನೆ ಹಿಂದೆ ಇವರ ಶ್ರದ್ಧೆ, ಛಲ, ನಂಬಿಕೆ ಎದ್ದ್ ಕಂಡದೆ. ಇವರ ಹೆಣ್ಣ್ ಹೇಮಲತ, ಮಂಜ ಸುಮಂತ್ ಡಿ.ಎಚ್.

ಗುತ್ತಿಗಾರು ಹಿರಿಯ ಪ್ರಾಥಮಿಕ ಶಾಲೆಲಿ ವಿದ್ಯೆ ಕಲ್ತ ಇವು ಸಂಘಟಕರಾಗಿ ಕೆಲ್ಸ ಮಾಡ್ದ ಸಂಸ್ಥೆಗ–

- ವಿವೇಕ ಜಾಗೃತ ಬಳಗ ಹರಿಹರ, ಪಳತಡ್ಕ, ಸುಬ್ರಮಣ್ಯ ಇದರ ಸಂಚಾಲಕ.
- ಹರಿಹರ ಕಾಲೇಜು ಹೋರಾಟ ಸಮಿತಿ ಸಂಚಾಲಕ
- ಹಾಲೆಮಜಲು ರಂಗಮಂದಿರ ನಿರ್ಮಾಣ ಸಮಿತಿ ಸಂಚಾಲಕ
- ಹಾಲೆಮಜಲು ಅಂಗನವಾಡಿ ಕಟ್ಟಡ ಸಮಿತಿ ಸಂಚಾಲಕ
- ಆದರ್ಶ ಯುವಕ ಮಂಡಲದ ಸದಸ್ಯ
- ಆದರ್ಶ ಯೂತ್ ಕ್ಲಬ್ ಮಾಧ್ಯಮ ಪ್ರತಿನಿಧಿ
- ಕರ್ನಾಟಕ ಅರಣ್ಯ ಇಲಾಖೆಯ ಸುಬ್ರಮಣ್ಯ ವಲಯದ ನಾಲ್ಕೂರು ಗ್ರಾಮ ಅರಣ್ಯ ಸಮಿತಿಯ ಸದಸ್ಯರಾಗಿ ನಿರಂತರ 10 ವರ್ಷ ಸೇವೆ.
- ಗ್ರಾಮ ಗೌಡ ಸವಿತಿ ನಾಲ್ಕೂರು ಇದರ ಸದಸ್ಯ.
- ವಿಜಯ ಬ್ಯಾಂಕ್ನ ವಿಜಯ ಗ್ರಾಮೀಣ ಅಭಿವೃದ್ಧಿ ಪ್ರತಿಷ್ಠಾನ ಇದರ ನಾಲ್ಕೂರು ಗ್ರಾಮ ಸಮಿತಿ ಕಾರ್ಯದರ್ಶಿ
- ಗುತ್ತಿಗಾರು ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ** ಮನೆ ಅಧ್ಯಕ್ಷ
- ಸುಬ್ರಮಣ್ಯ ಕಾರ್ಯನಿರತ ಪರ್ತಕರ್ತರ ಸಂಘದ ಅಧ್ಯಕ್ಷ
- ಸೌತ್ ಕೆನೆರಾ ಫೋಟೋಗ್ರಾಫರ್ಸ್ ಅಸೋಸಿಯೇಷನ್ (ರಿ) ದ.ಕ, ಉಡುಪಿ, ಇದರ ಸುಳ್ಯ ವಲಯದ ಸದಸ್ಯ
- ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಇದರ ಈಗಿನ ಸದಸ್ಯರಾಗಿ ಸೇವೆ ಮಾಡ್ತಾ ಒಳೋ.

ಸದ್ಯ ಹಾಲೆಮಜಲ್‌ನ ತಮ್ಮ ತಂದೆ ಮನೆಲಿ ಸಣ್ಣ ಪುಟ್ಟ ವ್ಯಾಪಾರ ವಹಿವಾಟ್ ಸುರು ಮಾಡೊಳೊ. ಇದರೊಟ್ಟಿಗೆ ಸಂಘಟನೆ, ಸಾಮಾಜಿಕ ಕೆಲ್ಸಗಳ್ಲಿ ನಿರಂತರರಾಗೊಳೊ.

ಇವರ ಹೋರಾಟದ ಅವಧಿಯ ಕೆಲ್ಸ ಕಾರ್ಯಗ ಹರಿಹರ ಜುನಿಯರ್ ಕಾಲೇಜು ಸ್ಥಾಪನೆ, ಬೆಂತೋಡಿ ಕೊಲ್ಲಮೊಗ್ರ ಸಂಪರ್ಕ ಸೇತುವೆ ನಿರ್ಮಾಣ, ಹಾಲೆಮಜಲು ಶಾಲೆಗೆ ಸರಕಾರದ ಅನುದಾನಲಿ ಸುವರ್ಣ ರಂಗ ಮಂದಿರ ನಿರ್ಮಾಣ.

ಹಾಲೆಮಜಲು ಅಂಗನವಾಡಿ ಕೇಂದ್ರಕ್ಕೆ ತಾಲೂಕು ಪಂಚಾಯ್ತಿ ಅನುದಾನಲಿ ಶಾಶ್ವತ ಕಟ್ಟಡ ನಿರ್ಮಾಣ, ಹಾಲೆಮಜಲು ಹೊಸಹಳ್ಳಿಗೆ ವಿಜ್ಞಾನ ಪರಿವರ್ತಕ ಅಳವಡಿಸುವಲ್ಲಿ ಯಶಸ್ವಿ. ಹೊಸಹಳ್ಳಿ ಗುಡ್ಡೆಮನೆಗೆ ಜಿಲ್ಲೆ ಪಂಚಾಯತ್ ಅನುದಾನಂದ ಸೇತುವೆ ನಿರ್ಮಾಣ. ಅರಣ್ಯ ಇಲಾಖೆಂದ ವನ್ಯ ಪ್ರಾಣಿಗಳ ಹಾವಳಿಂದ ಕೃಷಿಗೆ ಹಾನಿಯಾದ ಫಲಾನುಭವಿಗಳಿಗೆ ಇಲಾಖೆಯಿಂದ ಅನುದಾನ ತರಿಸುವಲ್ಲಿ ಯಶಸ್ವಿಯಾಗೊಳೊ.

ಇವರ ಈ ಎಲ್ಲ ಕೆಲ್ಸನ ಗುರ್ತ್ಸಿ ಬೇರೆ ಬೇರೆ ಸಂಘ ಸಂಸ್ಥೆಗ ಸನ್ಮಾನಿಸಿ ಗೌರವಿಸಿಯೊಳೊ. ರಾಜಕೀಯ ಹಿನ್ನಲೆ ಇಲ್ಲದೆ ಸಾಮಾಜಿಕವಾಗಿ ಗುರ್ತಿಸಿಕಂಡ ಇವು ಸ್ವಂತ ದುಡಿಮೆ, ಸೇವಾ ಮನೋಭಾವ ಇದ್ದರೆ ಸಾಧ್ಯ ಆದೆತಾ ದಿನೇಶ್ ಅವು ಹೇಳುವೆ. ದಿನೇಶ್ ಹಾಲೆಮಜಲು ಅವರ ಸಾಧನೆ ದಾರಿ ಹೂನ ದಾರಿ ಆಗಿರ್ದುಲೆ. ಕಷ್ಟ, ಬೇನೆ, ಅವಮಾನ ಎಲ್ಲ ಸಹಿಸಿಕಂಡ್ ಇಷ್ಟರ ಮಟ್ಟಿಗೆ ಬೆಳ್ದೊಳೊ. ದಿ. ಎನ್ ಶಿವ ಸುಬ್ರಹ್ಮಣ್ಯ ಭಟರ ಪ್ರೇರಣೆ, ಮಾರ್ಗದರ್ಶನನ ನೆನ್ಸಿಕಂಡವೆ. ಊರಿನವು, ಬಂಧು, ನಂದ್ಯಾಡಿ ಮಾದಪ್ಪ ಮಾಸ್ತರ್‌ರ ಸಹಕಾರನ ಮರೆದುಲೆ ಹಂಗೆ ಇವರ ತಮ್ಮ ಗಣೇಶ್ ಅವರ ಸಹಕಾರ ಉಟ್ಟು. ಒಳ್ಳ ಕೆಲ್ಸ ಮಾಡ್ಕನ ಕಾಳು ಎಳೆವು ಜಾಸ್ತಿ, ಧೈರ್ಯಲಿ ಮುಂದೆ ಹೋದರೆ ಒಂದಲ್ಲ ಒಂದ್ ದಿನ ಬೆಲೆ ಬಂದದೆ ತೇಳ್ದಕೆ ದಿನೇಶ್ ಅವು ಸಾಕ್ಷಿ.

---

## ನಮ್ಮ ಮನೆಯ ಗಮ್ಮತ್ತ್

–ಕರ್ಣಯ್ಯನ ಕೃಷಿಕ ಮಂದಣ್ಣ

ದುಂಬಿ ನಿನ್ನ ರಾಗಕ್ಕೆ, ಹಕ್ಕಿ ನಿನ್ನ ಹಾಡಿಗೆ
ಹೂಂದ ಹೂಗೆ ನಿಮ್ಮ ಒಂದ್ ಆಟಕ್ಕೆ
ಮೋಡ ನಾಚಿ ನೀರಾತೋ
ರಾತ್ರೆ ಕಳ್ದ್ ಬೆಳಗಾತೋ

ಮಳೆಯ ರಭಸಕೆ ಬೆಳಗೆನ ಚಳಿಗೆ
ಅವ್ವನ ಕೈಲಿ ತಟ್ಟಿದ ರೊಟ್ಟಿಗೆ
ಸಿಕ್ಕಿದ ಏಡಿಯ, ಗೈಪುನ ರುಚಿಗೆ
ಮಕ್ಕ ಇಲ್ಲೆ ಯಾರ್ ಹೊರಗೆ

ಅಕ್ಕನ ಸೋಬಾನೆ ಆಲ್‌ಸ್‌ದ ಹೊತ್ತ್
ಗೌಡರ ಗತ್ತ್, ತಾಯಿಯ ಹೊತ್ತ್
ಆಹಾ! ಹಬ್ಬ ಕಳ್ದ ಗಮ್ಮತ್ತ್
ನೋಡವ್ಕೆ ಬರೀ ಮಾತ್..

# ಹಳಬರ ಜೋಳಿಗೆ

**ಜಯಮ್ಮ ಚೆಟ್ಟಿಮಾಡ ಅವರ ಹಳಬರ ಜೋಳಿಗೆ ಸಂಚಿಕೆಂದ ಆರ್ಸಿದ ಕಥಾ ಮಾಲಿಕೆ–12**

ತುಳುನಾಡಿನ ವೈಶಿಷ್ಟ್ಯ ಪೂರ್ಣ ಆಚರಣೆ ಗುಳಿಗ ಸಮ್ಮಾನ

**ಕತೆ ಕೊಟ್ಟವು: ಚಂದ್ರಶೇಖರ ಮಂಡೆಕೋಲು**

ಪರಶುರಾಮ ಸೃಷ್ಟಿಯ ಈ ತುಳುನಾಡ್, ಅನೇಕ ದೈವ, ಭೂತಗ ಇರುವ ಲಾಯ್ಕದ ಬೀಡು. ಎಣಿಕೆಗೆ ಸಿಕ್ಕದೇ ಇರುವ ದೈವ, ಭೂತಗ ಇಲ್ಲಿ ಉಟ್ಟು. ಅದರ್ಲೂ ಗುಳಿಗ ದೈವನೂ ಒಂದು. ಶಿಷ್ಟರಿಗೆ ಅಷ್ಟೇನೂ ಸಂಬಂಧ ಇಲ್ಲದ, ಜನಪದರ್ ದೈವ ಭಕ್ತಿಂದ ಗುಳಿ ದೈವನ ವಿಶಿಷ್ಟ ರೀತಿಂದ ಪೂಜಿಸುದರ ಮೂಲಕ ಅವು ತೃಪ್ತರಾಗುವೆ. ಮನೆಗೊಬ್ಬ ಯಜಮಾನ ಇದ್ದಂಗೆ ಜಾಗೆಗೊಬ್ಬ ಗುಳಿಗ ಇದ್ದೇ ಇದ್ದದೆ. ಭೂಮಿ ಗುಳಿಗ ತ ಕರ್ದವೆ. ಈ ಭೂಮಿ ಗುಳಿಗ ಆ ಜಾಗೆಲಿ ಇರುವ ಸಂಸಾರಕ್ಕೆ ಕಬ್ಬಿಣದ ಬೇಲಿ ಇದ್ದಂಗೆ.

ಗುಳಿಗ ದೇವ ದೂತ, ಈಶ್ವರನ ಬೆವರ ಹನಿಂದ ಜನಿಸಿದ ಗುಳಿಗ ಆಟಿ ತಿಂಗಳ್ಲಿ ಬರುವ ಮಾರಿನ ಕಳ್ದದೆ ತ ನಂಬಿಕೆ. ಆಟಿ ಕಳಂಜನು ಆಟಿ ತೇಳೋ ಸ್ಥಿತ್ಯಂತರ ಕಾಲಲಿ ಸ್ವರ್ಗ ಸಮಾನವಾದ ಭೂಮಿಗೆ ಬಂದ್ ದುಷ್ಟರ ಸೊಕ್ಕಡಗಿಸಿ, ಭೂತ, ದೈವಗಳ ಚಾವಡಿಗಳಿಗೆ ಬೀಗ ಹಾಕಿಸಿದೆ!. ಇದರ್‌ಂದನೇ ಆಟಿ ತಿಂಗಳ್ಲಿ ಭೂತ ಸ್ಥಾನಗ ಮುಚ್ಚಿರ್ದು. ಗುಳಿಗಂಗೆ ವರ್ಷಲಿ ಒಂದ್ ಸಲ ಮಾತ್ರ ಸಮ್ಮಾನ. ಇದನ್ನ ಆಟಿ ತಿಂಗಳ್ಲಿ ಪ್ರತಿ ಮನೆಯವೂ ಕೂಡ ಕೊಟ್ಟವೆ. ಅಲ್ಲದೆ ಬೇರೆ ದಿನಲಿ ಏನಾರ್ ಕಷ್ಟ ಬಾತ್ ತ ಆದರೆ ಗುಳಿಗಂಗೆ 'ಕಳಾಯಿ' ಕೊಟ್ಟವೆ. ಈ ಕ್ರಿಯೆನ ಶರಾಬ್‌ಂದ ಮಂತ್ರವಾದಿ ಮಂತ್ರಶಕ್ತಿಂದ ಮಾಡ್ದೆ. ಆ ಮಾಂತ್ರಿಕ ಚಿಕ್ಕದಾದ ಬಾಳೆ ಎಲೆಲಿ ಶರಾಬು ಹಾಕಿ, ಮೂಡಣ ದಿಕ್ಕಿಗೆ ಮುಖ ಮಾಡಿ ನಿಂತ್, ಜೋರಾಗಿ ಮಂತ್ರ ಪಠಿಸಿದೆ. ಇದು ತುಳುಲಿ ಇದ್, ದೈವಗಳ ಕೋಲದ ಹೊತ್ತ್‌ಲಿ ಹೇಳುವ ಪಾಡ್ದನದಂಗೆ ಇದ್ದದೆ. ಇಲ್ಲಿ ಜಾತಿ, ಭೇದ ಇಲ್ಲೆ, ಮುಸ್ಲಿಂ ಬಾಂದವೂ ಕೂಡ ಗುಳಿಗಂಗೆ ಸಮ್ಮಾನನ ಭಯ ಭಕ್ತಿಂದ ಕೊಟ್ಟು ಗುಳಿಗ ದೈವದ ಕೃಪಾಕಟಾಕ್ಷಕ್ಕೆ ಪಾತ್ರರಾದವೆ. ಹಿಂಗಾಗಿ ಗುಳಿಗ ದೈವ ಜಾತ್ಯಾತೀತ. ಗುಳಿಗಂಗೆ ನೂರೊಂದು ಹೆಸ್ರ್‌ಗ. ಮಾರ್ಣ ಗುಳಿಗ, ವಾಯು ಗುಳಿಗ, ಅಮೃತ ಗುಳಿಗ, ನೆತ್ತರು ಗುಳಿಗ ಹಿಂಗೆ ಇನ್ನಷ್ಟ್. ರಾಹು ಗುಳಿಗ "ರಾಹು ಬೀಜದ ಮರ" ತೇಳೋ ಮರ ವಾಸ ಮಾಡ್ದೆ ಗಡ.

ಹೆಣ್ಣ್ ಮಕ್ಕ ಗುಳಿಗಂಗೆ ಆಗಿ ಬಾದುಲೆ. ಗುಳಿಗನ ಕಲ್ಲ್ ಇರುಗೆ ಜಾಗೆಗೆ ಗೂಡೆಗ ಹೋಕೆ ಬೊತ್ತ್. ಹೆಣ್ಣ್.. ಗುಳಿಗಂಗೆ ಸಂಬಂಧಿಸಿದಂಗೆ ಜಾನಪದಲಿ ಒಂದು ಕತೆ ಉಟ್ಟು. ಈ ಕತೆನ ಭತ್ತದ ಗದ್ದೆಲಿ ನೇಜಿ ನೆಡುವ ಹೊತ್ತ್‌ಲಿ ಇದನ್ನ ಹಾಡ್ ಮಾಡಿಕಂಡ್ ಹಾಡುವೆ.

ಬಾಳ ಹಿಂದೆ ವಾಸುಲ್ಲ ಭಟ್ಟ ಮತ್ತೆ ಬಾಲಕ್ಕಾದೇವಿ ತೇಳೋ ದೈವ ಭಕ್ತ ಬ್ರಾಹ್ಮಣ ದಂಪತಿಗ ಇದ್ದೊ. ಕಾಲಕ್ರಮೇಣ ವಾಸುಲ್ಲ ಭಟ್ಟ ತೀರಿಕಂಡ ಮೇಲೆ ಸಂತಾನ ಇಲ್ಲದ ವಿಧವೆ ಬಾಲಕ್ಕದೇವಿ ಒಬ್ಬಂಟಿ ಆದೊ. ಈ ಹೊತ್ತ್‌ಲಿ ಅವಳ ಗಂಡನಾದ ವಾಸುಲ್ಲ ಭಟ್ಟರೇ ಋಷಿಯ ವೇಷಲಿ ಬಂದ್ ಅವಳಿಗೆ ವರ ಕೊಡುವುದರ ಮೂಲಕ ಮಕ್ಕಳ್ನ ಕೊಟ್ಟ್ ಹೋದೆ. ಗಂಡ್ ಮಗು ಹುಟ್ಟಿರೆ ನನ್ನೊಟ್ಟಿಗೆ ಭಿಕ್ಷೆಗೆ ಕಳ್ಸಕು ತ ಹೇಳ್ದೆ. ಹೆಣ್ಣಾದರೆ ತನಗೇ ಧಾರೆ ಎರೆದು ಕೊಡಕು ತ ಕೇಳ್ದೆ! ಹಂಞ ಸಮೆ ಆದಂಗೆ ಬಾಲಕ್ಕಂಗೆ ಹೆಣ್ಣ್ ಕೂಸು ಹುಟ್ಟಿದೆ. ಆ ಕೂಸುಗೆ ಮೂಕಾಂಬಿಕೆ ತ ನಾಮಕರಣ ಮಾಡಿ, ಬಾಲ್ಯ ವಿವಾಹ ಪದ್ಧತಿನಂಗೆ ಮೂಕಾಂಬಿಕೆಗೆ ಸಣ್ಣ ವಯಸ್‌ಲೇ ಆ ಋಷಿಗೆ ಮೊದ್ವೆ ಮಾಡಿ ಕೊಟ್ಟವೆ.

ಹಿಂಗೆ ಹಂಞ ಸಮೆ ಕಳೆತಿದ್ದಂಗೆ ಮಲಯಾಳ ಸೀಮೆ (ಕೇರಳ) ಲಿ ನಡೆವ 'ಶಾಂತಿಲ ಪೂಜೆ' ಹೋಕೆ ಮೂಕಾಂಬಿಕೆಯ ಗಂಡನಾದ ಋಷಿಗೆ ಕರೆ ಬಂದದೆ. ಅದರಂಗೆ ಅವು ಆ ಪೂಜೆಗೆ ಹೊರ್ಟವೆ. 'ಶಾಂತಿಲ ಪೂಜೆ'ಲಿ ಹೆಣ್ಣ್ ಮಕ್ಕಳ್‌ಗೆ ಪ್ರವೇಶ ಇತ್ಲೆ. ಎಲ್ಲಿಯಾರ್ ತಪ್ಪಿ ಅಲ್ಲಿಗೆ ಹೋದರೆ ಆ ಹೆಣ್ಣ್‌ನ ತಲೆ ಕಡ್ದ್ ಹಾಕ್ತಾ ಇದ್ದೊ.

ಗಂಡ ತೆಂಕಣ ದಿಕ್ಕಿಗೆ (ಕೇರಳ) ಹೋಗ್ತಾ ಇರ್ವ ವಿಷಯ ಗೊತ್ತಾದ ಮೂಕಾಂಬಿಕೆ ತಾನೂ ಗಂಡನೊಟ್ಟಿಗೆ ಹೊರ್ಡಿಕೆ ನೋಡ್ದೆ. ಅವಳಿಗೆ ಗಂಡನೇ ಎಲ್ಲಾ ಆಗಿತ್. ಗಂಡನ ಹಂಙ ಹೊತ್ತ್ ಬುಟ್ಟೂ ಇರಿಕೆ ಅವಳ್‌ಂದ ಆಗ್ತಾ ಇತ್ಲೆ. ಗಂಡಂದ ದೂರ ಇರ್ದು ಧರ್ಮಕ್ಕೆ ವಿರುದ್ಧ ತೇಳ್ದು ಅವಳ ಭಾವನೆ. ಎಷ್ಟ್ ಸಲ ಬೇಡ ತೇಳ್ರು ತನ್ನ ಹಟನ ಬುಡದೆ ಋಷಿ ಒಟ್ಟಿಗೆ ಹೊರ್ಟೇ ಬುಟ್ಟತ್.

ಹೆಂಗೆ ಹೇಳ್ರೂ ಒಪ್ಪದೆ ಮೂಕಾಂಬೆಯನ್ನು ಒಟ್ಟಿಗೇ ಕರ್ಕಂಡ್ ಆಗಿದ್ದ್ ಆಗಲೀ ತ ಅವಳ ಗಂಡ ಶಾಂತಿಲ ಪೂಜೆಗಾಗಿ ಹೊರ್ಟೇ ಬುಟ್ಟದೆ. ಹಿಂಗೆ ಹೋಗ್ತಾ ಇರ್ಕನ ಕಡಮ್ಮಲ ಸೀಮೆನ (ಕಡಬ) ಸೇರುವೆ. ಅಲ್ಲಿ 'ಕಡಲ್ಲಮ್ಮಲದ ಮಯ್ಯರು' ಇವರ್ನ ಮನೆಗೆ ಕರ್ಕಂಡ್ ಹೋಗಿ ಉಪಚರಿಸುವೆ. ಕಡೆಗೆ ಎಲ್ಲಾ ವಿಷಯನ ತಿಳ್ಕಂಡ ಅವು ಮೂಕಾಂಬಿಕೆನ ಹೋಕೆ ಬುಡದೆ, ಅವಳನ್ನ ಅಲ್ಲಿಯೇ ನಿಲ್ಲಿಸಿಕಂಡವೆ. ಅವಳ ಗಂಡ ಅವಳ ರಕ್ಷಣೆಗಾಗಿ ಅವಳ್ನ ಒಂದು ಗುಂಡ (ಕೋಂಬರೆ) ಒಳಗೆ ನಿಲ್ಲಿಸಿ ಪ್ರಯಾಣ ಬೆಳ್ಸಿದೆ.

ವರ್ಷ ಕಳ್ದಂಗೆ ಕಡಮ್ಮಲದ ಮಯ್ಯರ ವರ್ತನೆಗ ಬದಲಾಕೆ ಸುರು ಆದೆ. ಒಂದು ದಿನ ಮೂಕಾಂಬಿಕೆ ಇದ್ದ ಗುಂಡದ ಬಾಗಿಲ್‌ನ ಮುರ್ದ್ ಕಾಮುಕ ಭಾವನೆಂದ ಮಯ್ಯರ್ ಅವಳ್‌ನ ಬಲತ್ಕಾರ ಮಾಡುವೆ. ಇದರ ಪರಿಣಾಮ ತಿಂಗಗ ಕಳ್ದಂಗೆ ಗಂಡು ಮಗುಗೆ ಜನ್ಮ ನೀಡ್ದೆ. ತಂದೆ ಇಲ್ಲದ ಮಗುನ ಹಿಡ್ಕಂಡ್ ಅವಳು ಕೊಲ್ಲೂರು ತೇಳುವಲ್ಲಿಗೆ ಹೋಗಿ ಮಾಯ ಆಗಿ ಹೆಣ್ಣ್ ಗುಳಿಗ ಆದೆ. ಆ ಮಗು ಸ ಗುಳಿಗ ಆದೆ. ಈ ರೀತಿಲಿ  ಗಂಡು ಗುಳಿಗ ಹೆಣ್ಣ್ ಗುಳಿಗಗ ಹುಟ್ಟಿದೊ ತ ಜಾನಪದಲಿ ಪ್ರಚಲಿತಲಿ ಇರುವ ಕತೆ. ಈ ಕತೆ ಒಂದೊಂದು ಊರಲ್ಲೂ ಒಂದೊಂದು ತರ ಉಟ್ಟು.

ಗುಳಿಗ ಸಮ್ಮಾನ ಆಟಿ ತಿಂಗಳ್ಲಿ ಮಾತ್ರ ನಡ್ದದೆ. ಮನೆಯರಲ್ಲದವರು ಈ ಸಮ್ಮಾನ ಅಡುಗೆಯ ಕೆಲ್ಸನ ಮಾಡಕು. ಅಡುಗೆಯ ಕೆಲ್ಸ ಪೂರ್ಣ ಆದಂಗೆ ಗುಳಿಗನ ಕಲ್ಲು ಇರುವ ಬನಕ್ಕೆ ಹೋಗಿ ದೀಪನ ಹೊತ್ತ್‌ಸಿ ಎಲೆ ಹಾಕಿ ಅನ್ನ ಮತ್ತೆ ಕೋಳಿಯ ಪದಾರ್ಥನ ಬಡ್ಸಿ ಪ್ರಾರ್ಥನೆ ಮಾಡುವೆ. "ನಾವು ಮಾಡ್ದ ಅಡಿಗೆಲಿ ಆಗಲಿ, ನಡ್ಕಂಡ ರೀತಿಲಿ ಅನೇಕ ತಪ್ಪು ಒಪ್ಪುಗ ಆಗಿರ್ದು, ಅದನೆಲ್ಲ ಮನ್ನಿಸಿ ವರ್ಷಕ್ಕೊಮ್ಮೆ ಕೊಡುವ ಈ ಸಮ್ಮಾನನ ಗುಳಿಗ ಸಂತೋಷಂದ ತಕಂಡ್, ಈ ನೆಲ, ಜನ, ಮಕ್ಕ, ಮರಿಗ, ಜಾನುವಾರ್‌ಗಳ್‌ಗೆ ಯಾವುದೇ ತೊಂದರೆ ತಾಪತ್ರಯಗ ಬಾರದಂಗೆ, ಮಾರಿಗೆ ಬೇಲಿ ಹಂಗೆ ನಿಂತ್ ಎಲ್ಲರನ್ನೂ ಕಾಪಾಡಕು ತ ಕೇಳಿಕಂಡವೆ' ತ ಹೇಳಿ ಅಕ್ಕಿ ಹಾಕ ಕೈ ಮುಗ್ದವೆ.

ಪ್ರಾರ್ಥನೆ ಆದಂಗೆ ಅಲ್ಲೆ ಹತ್ತಿರದ ಸಮತಟ್ಟಾದ ಜಾಗೆಗೆ ಹೋಗಿ ಎಲ್ಲರೂ ಸೇರಿ ಊಟ ಮಾಡುವೆ. ಗುಳಿಗನ ಕಲ್ಲು ಕಾಡಿಗೆ ಹತ್ರ ಇದ್ದರೆ.. ಕಾಡೊಳಗೆ ಕುದ್ದ್‌ಕಂಡ ಕಾಡ್‌ನ ಪೊರ್ಲುನ ನೋಡಿಕಂಡ್ ಚಂದಿರನ ಮಂದಿರ ಕುದ್ದ್ ಊಟ ಮಾಡ್ದಂಗೆ ಆದೆ. ಬ್ರಾಹ್ಮಣ್ಯವನ್ನ ಹೊಂದಿದವು ಬೇರೆಯವ್ಕೆ ಹೇಳಿ ಸಮ್ಮಾನ ಮಾಡ್ಸುವೆ. ಗುಳಿಗನ ಕಲ್ಲ್ ಇರುವ ಬನಕ್ಕೆ ಹೆಣ್ಣ್ ಮಕ್ಕಳ್‌ಗೆ ಒಳಕ್ಕೆ ಪ್ರವೇಶ ಇಲ್ಲೆ. ರಜಸ್ವಾಲೆ ಆಗದ ಸಣ್ಣ ಗೂಡೆಗ ಹೋಕು.

ದನಕರುಗ ಇಲ್ಲೆ ಯಾರಾದರ್ ಮೊನ್ಸರ್ ಮನೆಯ ಸುತ್ತಮುತ್ತ ಹೋಗ್ತಾ ಇರ್ಕನ ಎಲ್ಲಾರ್ ಮತಿ ತಪ್ಪಿ ಬಿದ್ದರೆ ಅದು ಗುಳಿಗನ ಪೆಟ್ಟು ತೇಳ್ದು ಜನರ ನಂಬಿಕೆ. ಅದರ ನಿವಾರಣೆಗೆ ಆ ಜಾಗೆಲಿ ಒಂದು ಕಲ್ಲು ನೆಟ್ಟ್ ಪೂಜಿಸಿಕಂಡ್ ಬಂದವೆ. ಹಿಂಗೆ ಅಲ್ಲಲ್ಲಿ ಗುಳಿಗನ ಕಲ್ಲ್‌ಗ, ಬನಗ ಸೃಷ್ಟ ಆದ್.

ಹಿಂಗೆ ಗುಳಿಗ ಊರ್‌ನ ತನ್ನ ಭಕ್ತ ಜನರ್ನ ಸಲಹಿಕಂಡ್ ತನಗೆ ಸಮ್ಮಾನ ಕೊಟ್ಟವರ್ನ ಕಾಪಾಡಿಕಂಡ್ ಬರ್ತಾ ಉಟ್ಟು ತೇಳ್ದು ಜನರ ನಂಬಿಕೆ. ಗುಳಿಗನ ಕಳಾಯಿ ಕೊಡ್ದು ತೇಳೋ ಕ್ರಿಯೆನ ವಿಮರ್ಶಿಸಿ ನೋಡ್ಕನ ಅದೊಂದು ಮಾಂತ್ರಿಕ ಆಚರಣೆ. ಇದ್ ಮಾಂತ್ರಿಕ ಧಾರ್ಮಿಕ ಚಿಕಿತ್ಸಾ ಪದ್ಧತಿ. ಜಾನಪದಲಿ ಶಕ್ತಿಯ ಆವಾಹನೆ ಮತ್ತೆ ವಿರೇಚನೆಯಾದೆ. ಗುಳಿಗ ಸಮ್ಮಾನವೂ ಆಟಿ ಕಳಂಜನಂತೆ ಜಾನಪದರ್ ಭಾವಶುದ್ಧೀಕರಣಕ್ಕಾಗಿ ಕೈಗೊಂಡ ಆಚರಣೆ.

## ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| ಹೆಸ್ರ್ | ವಯಸ್ | ತೀರ್ದ ತಾರೀಖ್ | ಹೆಸ್ರ್ | ವಯಸ್ | ತೀರ್ದ ತಾರೀಖ್ |
|---|---|---|---|---|---|
| ಪೊನ್ನಚನ ಸೋಮಯ್ಯ (ಚಿಮ್ಮಣ) | 66 | 16–10–2018 | ಹೊದ್ದೇಟಿ ಶಿವರಾಯ | 57 | 21–11–2018 |
| ಪೂಜಾರಿರ ಚಂದ್ರಶೇಖರ್ | 66 | 7–10–2018 | ಬೊಳ್ತಜಿ ರಾಧಕೃಷ್ಣ (ರಾಧ) | 56 | 21–11–2018 |
| ಕರ್ಣಯನ ದೇವಕ್ಕಿ | 83 | 9–10–2018 | ಕಾಚಿಲಂಡ ದೇವಮ್ಮ | 77 | 23–11–2018 |
| ಕೊಂಬಂಡ ಎಂ.ಬಿದ್ದಪ್ಪ | 76 | 13–10–2018 | ಮಾಯೆಟ್ಟಿ ಸೀತಮ್ಮ | 76 | 24–11–2018 |
| ಮುಕ್ಕಾಟಿ ಪೊನ್ನುಮಣಿ | 65 | 16–10–2018 | ಪಾಂಡಿಮನೆ ಬೆಳ್ಯಪ್ಪ | 95 | 26–11–2018 |
| ಮುಕ್ಕಾಟಿ ಬಿದ್ದಪ್ಪ | 78 | 19–10–2018 | ತೆಕ್ಕಡೆ ನಂದಕುಮಾರ್(ನಂದ) | 56 | 29–11–2018 |
| ಪಡ್ಡಂಬೈಲು ಲೀಲಾವತಿ | 67 | 19–10–2018 | ಪೋರೆಯನ ಪೊನ್ನಪ್ಪ | 83 | 29–11–2018 |
| ಕಡ್ಲೇರ ಮೋಹನ್ (ಬಿಜು) | 47 | 20–10–2018 | ಸೋಮೆಟ್ಟಿ ಗಣಪತಿ | 61 | 29–11–2018 |
| ಪೊಕ್ಕುಳಂಡ್ರ ಬೋಜಪ್ಪ | 67 | 21–10–2018 | ಕಳಂಜನ ಬಾಲಕೃಷ್ಣ | 66 | 2–12–2018 |
| ಯಂಕನ ಬೆಳ್ಯಪ್ಪ | 76 | 22–10–2018 | ಉದಿಯನ ಸುಬ್ಬಯ್ಯ | 85 | 3–12–2018 |
| ಅಮೆಮನೆ ಗೌರಮ್ಮ | 66 | 26–10–2018 | ಕೇಚಪ್ಪನ ಯಾದಪ್ಪ | 74 | 5–12–2018 |
| ಕುಂಜಿಲನ ಈರಪ್ಪ (ರಾಜ) | 54 | 30–10–2018 | ಕಡ್ಲೇರ ಚಿನ್ನಪ್ಪ | 53 | 7–12–2018 |
| ಕೂಡಕಂಡಿ ಎಂ. ರಾಮಕೃಷ್ಣ | 69 | 30–10–2018 | ಪೊಕ್ಕುಳಂಡ್ರ ವಸಂತ (ಪಾಪು) | 80 | 16–12–2018 |
| ಹುಲಿಮನೆ ಸುಂದರಮ್ಮ | 56 | 30–10–2018 | ಕಡ್ಯದ ಸರೋಜ | 76 | 18–12–2018 |
| ಚೋಂಡೀರ ಲೀಲಾವತಿ | 75 | 31–10–2018 | ಬೊಳ್ತಜಿರ ಬೊಳ್ಳಮ್ಮ | 96 | 18–12–2018 |
| ಕೇಕಡ ನಿಶಾಂತ್ | 18 | 5–11–2018 | ಕೊತ್ತೋಳಿ ಚಂದನ್ (ರಂಜು) | 29 | 24–12–2018 |
| ಕುಟ್ಟನ ಧರಣಿ | 53 | 8–11–2018 | ಪೈಕೇರ ಹೊನ್ನಮ್ಮ | 62 | 25–12–2018 |
| ಕುದುಪಜೆ ಚಿಣ್ಣಪ್ಪ | 70 | 9–11–2018 | ನೀರುಕೋಡಿ ಕಾಳಪ್ಪ | 70 | 25–12–2018 |
| ಪರಿಚನ ಪಾರ್ವತಿ | 68 | 10–11–2018 | ಕಾಸ್ಪಾಡಿ ಪೊನ್ನವ್ವ | 87 | 25–12–2018 |
| ಊರೊಳನ ತಿಮ್ಮಯ್ಯ | 95 | 11–11–2018 | ಊರೊಳನ ಗೋಪಾಲ | 73 | 26–12–2018 |
| ಎಡಿಕೇರಿ ಬೆಳ್ಯಪ್ಪ | 90 | 11–11–2018 | ತುಂತಜೀರ ಗಾಯತ್ರಿ | 58 | 27–12–2018 |
| ಆನೇರ ಬೋಪಯ್ಯ(ಡಾಲು) | 76 | 15–11–2018 | ಉಗ್ರಾಣಿ ಡಾಲಿ (ಉತ್ತಯ್ಯ) | 56 | 27–12–2018 |
| ಕುಲ್ಲಚೆಟ್ಟಿ ದೇಚವ್ವ | 75 | 19–11–2018 | ಮೇಲ್‌ಚೆಂಬು ನಂಜಪ್ಪ | 68 | 30–12–2018 |
| ಹುದೇರಿ ದೇವಯ್ಯ | 92 | 19–11–2018 | ಉದಿಯನ ಅಪ್ಪಾಜಿ | 73 | 28–12–2018 |
| ಹೊನ್ನದ ಕಾರ್ಯಪ್ಪ | 56 | 19–11–2018 | ಚೊಕ್ಕಾಡಿ ಅಪ್ಪಯ್ಯ | 63 | 28–12–2018 |
| ಸಿರಕಜೆ ವಿಜಯ್‌ಕುಮಾರ್ | 54 | 20–11–2018 | ಎಡಿಕೇರಿ ರಮೇಶ್ | 68 | 30–12–2018 |
| ಕೆದಂಬಾಡಿ ಶಿವಾಜಿ | 80 | 20–11–2018 | ಕೊಲ್ಯದ ದೇವಯ್ಯ (ಅಪ್ಪುಣು) | 63 | 31–12–2018 |

| ಹೆಸ್ರ್ | ವಯಸ್ | ತೀರ್ದ ತಾರೀಖ್ | ಹೆಸ್ರ್ | ವಯಸ್ | ತೀರ್ದ ತಾರೀಖ್ |
|---|---|---|---|---|---|
| ಕಡ್ಯದ ನಾಣಯ್ಯ | 76 | 1–1–2019 | ತೆಕ್ಕಡೆ ಲೀಲಾವತಿ | 64 | 6–1–2019 |
| ಅಚಲ್ಪಾಡಿ ಅಪ್ಪಯ್ಯ | 73 | 1–1–2019 | ಕಾನಡ್ಕ ಸೋಮಯ್ಯ | 63 | 7–1–2019 |
| ಪಡ್ಡಂಬೈಲು ದಾಮೋದರ | 63 | 1–1–2019 | ಪೈಕೇರ ವಿಶಾಲಾಕ್ಷಿ | 66 | 7–1–2019 |
| ಕೋಟೇರ ಹೊನ್ನಪ್ಪ (ಮಣಿ) | 63 | 1–1–2019 | ಬೈಚನ ಕುಮಾರಿ | 67 | 9–1–2019 |
| ಕೇಕಡ ಶಾರದ | 71 | 2–1–2019 | ಬಡುವಂಡ್ರ ರಮೇಶ (ರಘು) | 68 | 7–1–2019 |
| ಮಂಞಂಡ್ರ ಪಾರ್ವತಿ | 53 | 4–1–2019 | ಮಳ್ಳಂದಿರ ಬಿಂದುಸಾರ | 41 | 7–1–2019 |

*ನಾವ್ಗೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ.
ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಟ್ಟಿಗೆ ಹಂಚಿಕಣಿ.

---

## ಮೈಸೂರ್‌ಲಿ ನಡ್ದ ಸೌಹಾರ್ದಕೂಟ ಜಂಬರ

ಕಳ್ದ ಡಿಸೆಂಬರ್ ತಾರೀಖ್ 17 ರಂದ್ ಮೈಸೂರ್‌ನ ಹೂಟಗಳ್ಳಿನ ಕೊಡಗು ಗೌಡ ಕ್ಷೇಮಾಭಿವೃದ್ಧಿ ಸಂಘದ ಕಡೆಂದ ಕ್ರೀಡಾ ಮತ್ತೆ ಸೌಹಾರ್ದ ಕೂಟ ಜಂಬರ ಸಂಘದ ಅಧ್ಯಕ್ಷ ಚೆಟ್ಟಿಮಾಡ ಜನಾರ್ಧನ ಅವರ ಅಧ್ಯಕ್ಷತೆಲಿ ನಡ್ತ್.

ಜಂಬರಕೆ ಕ್ಷೇತ್ರ ಶಿಕ್ಷಣಾಧಿಕಾರಿ ಮಂಡ್ಯ ಹತ್ರದ ಪಾಂಡವಪುರ ದೇವಂಗೋಡಿ ಮಲ್ಲೇಶ್ವರಿ, ಕೂರ್ಗಳ್ಳಿ ಗ್ರಾಮ ಪಂಚಾಯ್ತಿ ಸದಸ್ಯೆ ಬೆಳ್ಳಿಮಾನಿ ಸುಧಾರಾಣಿ ಅವು ಮುಖ್ಯ ನೆಂಟ್‌ರ್‌ಗಳಾಗಿ ಭಾಗವಹಿಸಿದ್ದೊ.

ಜಂಬರಲಿ ಆಟೋಟ, ಅರೆಬಾಸೆ ರಸಪ್ರಶ್ನೆ, ಸಾಂಸ್ಕೃತಿಕ ಕಾರ್ಯಕ್ರಮ, ಪ್ರತಿಭಾ ಪುರಸ್ಕಾರ, ಕೊಡಗ್‌ಲಿ ನಡ್ದ ಪ್ರಕೃತಿ ವಿಕೋಪಂದ ಸಂಕಷ್ಟಲಿ ಇರುವ ಗೌಡ ಜನಾಂಗದ ಸಬ್ಬಂಡ್ರ ಶರತ್, ಸಂಜಯ್ ಯಾಲದಾಳು ರವಿ, ಬಾಣೂರು ಘನಾವತಿ, ನಾರ್‌ಕೋಡಿ ಧನಲಕ್ಷ್ಮಿ ಅವ್ಕೆ ತಲಾ ಹತ್ತು ಸಾವಿರದಂಗೆ ಧನಸಹಾಯ ನೀಡ್ದೊ.

ಜಂಬರಲಿ ಸಂಘದ ಉಪಾಧ್ಯಕ್ಷ ಚರಕನ ಲವ, ಪ್ರಧಾನ ಕಾರ್ಯದರ್ಶಿ ಅರುಣ್‌ಕುಮಾರ್, ಖಜಾಂಜಿ ಎಡಿಕೇರಿ ಪೂಣಚ್ಚ, ಸಂಘದ ಸಹಕಾರ್ಯದರ್ಶಿ ಚಿಕ್ಕೋಡಿ ರಮೇಶ್ ಸೇರ್ದಂಗೆ ನಿರ್ದೇಶಕರ್, ಮುಖ್ಯಪಟ್ಟವು, ಜನಾಂಗ ಬಾಂಧವು ಭಾಗವಹಿಸಿದ್ದೊ.

ಸುದ್ದಿ: ಉಳುವಾರನ ರೋಶನ್ ವಸಂತ್

## ನೆಂಟತಿ ಗೂಡೆ ಕಿರು ಚಿತ್ರ ಬುಡುಗಡೆ

ಅರೆಬಾಸೆ ಕಿರುಚಿತ್ರಗ ಒಂದೊಂದೇ ತೆರೆ ಕಾಣ್ತ ಉಟ್ಟು. ಕಳ್ದ ವರ್ಸ ತೆರೆ ಕಂಡ ನೆರೆಮನೆ ಮಕ್ಕ ಚಿತ್ರ ಬಾಳಷ್ಟ್ ಜನರ ಮೆಚ್ಚುಗೆಗೆ ಪಾತ್ರ ಆಗಿತ್ತ್. ಈಗ ಅದೇ ಸಾಲ್‌ಗೆ ನೆಂಟತಿ ಗೂಡೆ ಕಿರು ಚಿತ್ರ ಸೇರುಟು.

ಇತ್ತೀಚೆಗೆ ಮಡಿಕೇರಿ ಮೇಲೆನ ಗೌಡ ಸಮಾಜಲಿ ಕಳಂಜನ ವಿಷ್ಣು ಅವರ ನಿರ್ದೇಶನಲಿ ವಿಷ್ಣು ಕ್ರಿಯೇಷನ್ಸ್‌ನ ಕಡೆಂದ ತಯಾರಾದ ಅರೆಬಾಸೆ ಕಿರು ಚಿತ್ರ ನೆಂಟತಿ ಗೂಡೆ ಬಿಡುಗಡೆ ಆತ್.

ಜಂಬರನ ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪಿ.ಸಿ ಜಯರಾಮ್ ಅವು ಉದ್ಘಾಟನೆ ಮಾಡ್ದೊ. ಮತ್ತೆ ಅವು ಮಾತಾಡಿ ಎಲ್ಲವ್ಕೂ ನಮ್ಮ ಬಾಸೆ ಮೇಲೆ ಅಭಿಮಾನ ಇರೊಕು ದೇಶದ ಎಲ್ಲಾ ಬಾಸೆಗಳಿಗೂ ಸಂಸ್ಕೃತಿ ಉಟ್ಟು. ಇದನ ಉಳ್ಸಿಕಣ್‌ವ ಜವಾಬ್ದಾರಿ ಯುವ ಜನಾಂಗದ ಮೇಲೆ ಉಟ್ಟು. ಇದರ ಕಡೆ ಯುವ ಜನಾಂಗ ಎಚ್ಚರ ತಕೋಣಕು. ಹೈದಂಗಳ ತಂಡ ತಾವೇ ನಿರ್ದೇಶನ ಮಾಡಿ ತಯಾರ್ ಮಾಡ್ದ ಚಿತ್ರ ಗೌಡ ಜನಾಂಗದ ಸಂಸ್ಕೃತಿ ಮತ್ತೆ ಕೃಷಿ ಪದ್ಧತಿನ ಉಳ್‌ಸಿಕಂಡ್ ಹೋಗುವ ಸಂದೇಶಗಳ್‌ನ ಚಿತ್ರಗಳ್ಲಿ ಪರಿಚಯ ಮಾಡಿಕೊಡ್‌ದು ಒಳ್ಳ ಬೆಳವಣಿಗೆ. ಮುಂದೆನ ದಿನಗಳ್ಲಿ ಅರೆಭಾಷೆ ಬ್ಯಾನರ್‌ನಡಿಲಿ ಹೊಸ ಚಿತ್ರಗಳ ಬಿಡುಗಡೆ ಮಾಡಿವೆ. ಇದ್ಕೆ ಬೇಕಾದ ಖರ್ಚಿನ ನೆರವು ಅಕಾಡೆಮಿಲಿ ಉಟ್ಟು, ಇದರ ಬಳ್ಸಿಕಣೊಕು ತ ಹೇಳ್ದೊ.

ಮಡಿಕೇರಿ ನಹರಸಭೆ ಅಧ್ಯಕ್ಷೆ ಕೂಡಕಂಡಿ ಕಾವೇರಮ್ಮ ಸೋಮಣ್ಣ ಅವು ಮಾತಾಡಿ ಮಕ್ಕಳೇ ಕೂಡಿಕಂಡ್ ತಯಾರ್ ಮಾಡ್ದ ಈ ಚಿತ್ರನ ಎಲ್ಲವೂ ಮೆಚ್ಚವಂತದ್ದ್. ಓದುವ ಮಕ್ಕ ಪಾಠದೊಟ್ಟಿಗೆ ಬೇರೆ ಚಟುವಟಿಕೆಗಳ್ಲಿ ತಮ್ಮನ ತಾವು ತೊಡಗಿಸಿಕಂಡ್ರೆ ಒಳ್ಳ ವ್ಯಕ್ತಿತ್ವನ ಬೆಳ್‌ಸಿಕಣಕ್‌ತ ಹೇಳ್ದೊ. ಕೊಡಗು ಗೌಡ ಸಮಾಜಗಳ ಒಕ್ಕೂಟದ ಅಧ್ಯಕ್ಷ ಸೂರ್ತಲೆ ಸೋಮಣ್ಣ ಅವು ಮಾತಾಡಿ ಕಲಾವಿದರಿಗೆ ಸಮಾಜಲಿ ಒಳ್ಳ ಬೆಲೆ ಉಟ್ಟು. ಅರೆಬಾಸೆ ಬೆಳವಣಿಗೆಯಾಕೆ ಇಂತ ಚಿತ್ರಗ ತುಂಬಾ ಮುಖ್ಯತ ಹೇಳ್ದೊ.

ಮಡಿಕೇರಿ ಗೌಡ ಸಮಾಜದ ಅಧ್ಯಕ್ಷ ಪೇರಿಯನ ಜಯಾನಂದ ಅವು ಮಾತಾಡಿ 'ನೆಂಟತಿ ಗೂಡೆ' ಚಿತ್ರಲಿ ಹೊಸ ಪ್ರಯತ್ನ ಆವ್ಟು. ಕೊಡಗ್ ಮತ್ತೆ ದಕ್ಷಿಣ ಕನ್ನಡ ಜಿಲ್ಲೆನ ಗೌಡ ಜನಾಂಗಗಳ ಸಂಸ್ಕೃತಿ ಹಂಗೆ ಸಂಪ್ರದಾಯನ ಪರಿಚಯ ಮಾಡಿ ಕೊಡುವ ಕೆಲ್ಸನ ವಿಷ್ಣು ಕ್ರಯೇಷನ್ಸ್ ತಂಡದವು ಮಾಡಿಯೊಳೊ. ಬೇರೆ ಭಾಷೆಗಳ್ಲಿ ಹೆಚ್ಚ್ ಹೆಚ್ಚ್ ಚಿತ್ರಗ ತಯಾರ್ ಆವ್ಟು ಆದರೆ ನಮ್ಮ ಭಾಷೆಲಿ ಬಾಳ ಕಮ್ಮಿ ಉಟ್ಟು. ಮುಂದಿನ ದಿನಗಳ್ಲಿ ಇನ್ನಷ್ಟ್ ಚಿತ್ರಗ ತಯಾರ್ ಆಕು ಇದರ್‌ಂದ ಬಾಸೆ ಬೆಳ್ದದೆತ ಹೇಳ್ದೊ.

ನೆಂಟತಿ ಗೂಡೆ ಚಿತ್ರದ ನಿರ್ದೇಶಕ ಕಳಂಜನ ವಿಷ್ಣು ಅವು ಮಾತಾಡಿ ಈ ಚಿತ್ರಲಿ ಕೊಡಗ್‌ನ ಗೌಡ ಜನಾಂಗದ 35ಕ್ಕೂ ಹೆಚ್ಚ್ ಕಲಾವಿದರ್ ನಟನೆ ಮಾಡಿಯೊಳೊ. ಕೊಡಗ್‌ನ ಸುತ್ತುಮುತ್ತು ಚಿತ್ರೀಕರಣ ಆವ್ಟು. ಐನ್‌ಮನೆಗಳ ಪೊರ್ಲುನ ಪರ್‌ಚಯ ಮಾಡಿಯೊಳೋತ ಹೇಳ್ದೊ.

ಚಿತ್ರಲಿ ಮುಖ್ಯ ನಕ್ಷತ್ರ ಆಗಿ ಕಡ್ಯದ ಜಾಗೃತಿ, ಚಿತ್ರದ ಸಹ ನಿರ್ದೇಶಕನಾಗಿ ತೋರೇರ ಹೇಮಂತ್, ಚಿತ್ರಕಥೆ ತೋರೇರ ಸಚಿನ್, ದಿವಾಕರ್ ಕ್ಯಾಮರ ನಿರ್ವಹಣೆ ಮಾಡಿಯೊಳೊ. ಚಿತ್ರಲಿ ಕುಡೆಕಲ್ ಸಂತೋಷ್, ಸವಿತಾ ಸಂತೋಷ್, ಚೊಕ್ಕಾಡಿ ಪ್ರೇಮ, ಕಳಂಜನ ವಿಷ್ಣು ಮುಖ್ಯ ಪಾತ್ರಲಿ ಕಣಿಸಿಕಂಡೊಳೊ. ಇವರೊಟ್ಟಿಗೆ ಕುಡೆಕಲ್ ನಿಹಾಲ್, ಸಾಗರಿಕ ಕುಡೆಕಲ್, ಕುಯ್ಯಮುಡಿ ಕುಸುಮ, ಕೇಟೋಳಿ ಹರ್ಷ, ಗೊದ್ದೇಟಿ ಪವನ್, ಕಾನೆಹಿತ್ಲು ಹರ್ಷಿತ್, ಬೈತಡ್ಕ ತುಷಿತ್, ಮೆದಾಳು ಚೇತನ್ ಪಾತ್ರ ನಿರ್ವಹಿಸಿಯೊಳೊ.

ಜಂಬರಲಿ ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆ ಕುಂಜಿಲನ ಮುತ್ತಮ್ಮ, ಗೌಡ ವಿದ್ಯಾ ಸಂಘದ ಅಧ್ಯಕ್ಷೆ ಹೊಸೂರು ರಮೇಶ್ ಜೋಯಪ್ಪ, ಕೋಡಿ ಚಂದ್ರಶೇಖರ್, ದಯಾನಂದ ಸೇರ್ದಂಗೆ ಮುಖ್ಯಪಟ್ಟವು, ಜನಾಂಗ ಬಾಂಧವು ಭಾಗವಹಿಸಿದ್ದೊ.

ಚಿತ್ರನ ನೋಡಿಕೆ ಯೂಟೂಬ್‌ಲಿ 'ನೆಂಟತಿ ಗೂಡೆ' ತ ಹುಡ್ಕಿರೆ ಸಿಕ್ಕಿದೆ.

## ಜಾಲ್ಸೂರುಲಿ ನಡ್ದ ಅರೆಭಾಸೆ

### ವಿಚಾರ ಸಂಕೀರ್ಣ, ಕವಿಗೋಷ್ಠಿ–ಸಾಂಸ್ಕೃತಿಕ ಗೌಜಿ ಜಂಬರ.

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಮುಂದಾಳತ್ವಲಿ ಗೌಡರ ಸೇವಾ ಸಂಘ ಸುಳ್ಯ, ಗೌಡ ಸಮಿತಿ ಜಾಲ್ಸೂರು, ವಿಜಯ ಗ್ರಾಮಾಭಿವೃದ್ಧಿ ಸಮಿತಿ ಜಾಲ್ಸೂರು. ಇವರ ಕೂಡುಕೂಟುಲಿ ಜನವರಿ ತಾರೀಖ್ 5ಕ್ಕೆ ಜಾಲ್ಸೂರ್‌ನ ಶ್ರೀ ರಾಘವೇಂದ್ರ ಸಭಾಭವನಲಿ ಅರೆಭಾಷೆ ವಿಚಾರ ಸಂಕೀರ್ಣ, ಕವಿಗೋಷ್ಠಿ–ಸಾಂಸ್ಕೃತಿಕ ಗೌಜಿ ಜಂಬರ ಬಾಳ ಲಾಯ್ಕಲಿ ನಡ್ತ್.

ಜಂಬರನ ಕುಕ್ಕೇ ಶ್ರೀ ಸುಬ್ರಮಣ್ಯ ದೇಸ್ಥಾನದ ವ್ಯವಸ್ಥಾಪನಾ ಸಮಿತಿ ಅಧ್ಯಕ್ಷ ಮುಂಡೋಡಿ ನಿತ್ಯಾನಂದ ಅವು ಉದ್ಘಾಟನೆ ಮಾಡ್ದೊ. ಕಡೆಗೆ ಮಾತಾಡ್ದ ಅವು ಯಾವುದೇ ಬಾಸೆನ ಬೆಳವಣಿಗೆಗೆ ಆ ಬಾಸೆನ ಸಾಹಿತ್ಯನೇ ಮುಖ್ಯ. ಅರೆಬಾಸೆಲೂ ಸಮೃದ್ಧ ಸಾಹಿತ್ಯ ಉಟ್ಟು. ಇದರ್‌ಂದ ಅರೆಬಾಸೆ ಇನ್ನ್ ದೊಡ್ಡದಾಗಿ ಬೆಳಿಯೋಕು. ಅಕಾಡೆಮಿ ಸುರಾದಲ್ಲಿಂದ ನಮ್ಮ ಅರೆಬಾಸೆಗೆ ವಿಶೇಷ ಗೌರವ ಬಂದುಟು. ಹಿಂದೆಲ್ಲ ಅರೆಬಾಸೆಲಿ ಮಾತಾಡ್ರೆ ಅದ್ ತಮಾಷೆನ ವಿಚಾರ ಆಗ್‌ತಿತ್. ಆದರೆ ಈಗೆಲ್ಲ ಅಭಿಮಾನ ಬಂದುಟ್ಟು. ಅಕಾಡೆಮಿ ನಡ್ಸುವ ಎಲ್ಲಾ ಕಾರ್ಯಕ್ರಮಗಳ್ಲೂ ಎಲ್ಲವು ಭಾಗವಹಿಸೊಕುತ ಹೇಳ್ದೊ.

ಅಕಾಡೆಮಿನ ಅಧ್ಯಕ್ಷ ಪಿ.ಸಿ. ಜಯರಾಮ್ ಅವು ಮಾತಾಡಿ ಬಾಸೆ ಜಾತಿ, ಮತ, ಧರ್ಮ, ಜನಾಂಗನ ದಾಟಿ ಹೋಕು ಆಗ ಬಾಸೆನ ಸಾಮರಸ್ಯ ಆದೆ. ಬಾಸೆನ ಉಳ್ಸಿ ಬೆಳ್ಸಿಕ್ಕಾಗಿ ಅಕಾಡೆಮಿನ ಕಡೇಂದ ಸುಮಾರ್ ಯೋಜನೆಗ ಜಾರಿಲಿ ಉಟ್ಟು. ಮುಂದೆ ಸುಳ್ಯ ಮತ್ತೆ ಮಡಿಕೇರಿಲಿ ಅರೆಭಾಸೆ ಸಾಹಿತ್ಯ ಸಮ್ಮೇಳನನ ನಡ್ಸಿಕೆ ಅಕಾಡೆಮಿ ಚಿಂತನೆ ಮಾಡಿಯುಟ್ಟುತ ಹೇಳ್ದೊ.

ಇದೇ ಹೊತ್ತ್‌ಲಿ ಜಿಲ್ಲಾ ಪಂಚಾಯ್ತಿ ಸದಸ್ಯೆ ಪುಷ್ಪಾವತಿ ಬಾಳಿಲ, ತಾಲೂಕು ಪಂಚಾಯ್ತಿ ಸದಸ್ಯ ತೀರ್ಥರಾಮ ಜಾಲ್ಸೂರು, ಜಾಲ್ಸೂರು ಗೌಡ ಗ್ರಾಮ ಸಮಿತಿ ಅಧ್ಯಕ್ಷ ಉಮಾನಾಥ ಗೌಡ, ವಿಜಯ ಗ್ರಾಮಾಭಿವೃದ್ಧಿ ಸಮಿತಿ ಅಧ್ಯಕ್ಷ ಕಾಳಮನೆ ಯಶ್ವಂತ್ ಸೇರ್ದಂಗೆ ಜಂಬರದ ಸಂಚಾಲಕಿ ಅಕಾಡೆಮಿನ ಸದಸ್ಯೆ ಅಡ್ಕಾರ್ ತಿರುಮಲೇಶ್ವರಿ, ಅಕಾಡೆಮಿನ ಸದಸ್ಯರ್, ಮುಖ್ಯಪಟ್ಟವು, ಜನಾಂಗ ಭಾಂದವು ಭಾಗವಹಿಸಿದ್ದೊ.

---

## ಮಡಿಕೇರಿ ಕೊಡಗು ಗೌಡ ವಿದ್ಯಾಸಂಘಲಿ ನಡ್ದ
## ಪ್ರತಿಭಾ ಪುರಸ್ಕಾರ ಮತ್ತೆ ಸಾಧಕರಿಗೆ ಸನ್ಮಾನ ಜಂಬರ

ಕಳ್ದ ಡಿಸೆಂಬರ್ ತಾರೀಖ್ 25ಕ್ಕೆ ಕೊಡಗು ಗೌಡ ವಿದ್ಯಾಸಂಘದ ಕಟ್ಟದಲಿ ಸಂಘದ ಕಡೆಂದ ವರ್ಷೋಳು ನಡ್ಸಿಕಂಡ್ ಬರ್ತಾ ಇರ್ವ ಪ್ರತಿಭಾ ಪುರಸ್ಕಾರ ಮತ್ತೆ ಸಾಧಕರಿಗೆ ಸನ್ಮಾನ ಜಂಬರ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ ಅವರ ಅಧ್ಯಕ್ಷತೆಲಿ ನಡ್ತ್. ಜಂಬರನ ಉದ್ಘಾಟನೆ ಮಾಡಿ ಮಾತಾಡ್ದ ಅವು ಶಿಕ್ಷಣ ಸೇರ್ದಂಗೆ ಬೇರೆ ಕ್ಷೇತ್ರಲೂ ಸಾಧನೆ ಮಾಡ್‌ದ ಜನಾಂಗದ ಸಾಧಕರ್‌ನ ಗುರ್ತು ಮಾಡಿ ಸಂಘದ ಕಡೆಂದ ವರ್ಷೋಳು ಬೆನ್ನ್‌ತಟ್ಟಿಕಂಡ್ ಬರ್ತಾ ಒಳೊ. ಸಂಘದ ಕಡೆಂದ ವಿದ್ಯಾಸಂಸ್ಥೆ ಸುರು ಮಾಡಿ ಅದರ್‌ಂದ ಶಿಕ್ಷಣ ಕ್ಷೇತ್ರಕ್ಕೆ ಇನ್ನ್ ಪ್ರೋತ್ಸಾಹ ಕೊಡುವ ಗ್ಯಾನ ಉಟ್ಟು. ಇದಕ್ಕಾಗಿ ಪ್ರಯತ್ನನೂ ನಡೀತಾ ಉಟ್ಟು. ಇದ್ಕೆ ಜನಾಂಗದ ಹಿರಿಯವು ಕೊಡುವ ಸಲಹೆ ಸೂಚನೆನ ಸಂಘದ ಸಭೆಲಿ ಹೇಳಿ ಕ್ರಮ ತಕಂಡವೆತ ಹೇಳ್ದೊ.

ಮಡಿಕೇರಿ ಸರಕಾರಿ ಪದವಿ ಪೂರ್ವ ಕಾಲೇಜ್‌ನ ಉಪ ಪ್ರಿನ್ಸಿಪಾಲ್ ಕೋಡಿ ಗುರುರಾಜ್ ಅವು ಮಾತಾಡಿ ನಮ್ಮ ಬಾಸೆ, ಆಚಾರ–ವಿಚಾರ ಮರೆಯಕಾಗದ್. ಬಾಸೆನ ಬೆಳವಣಿಗೆಗೆ ಎಲ್ಲವೂ ಕಷ್ಟಪಡೊಕು. ಓದುವ ಮಕ್ಕ ವಿದ್ಯೆನೊಟ್ಟಿಗೆ ನಮ್ಮ ಬಾಸೆ ಸಂಸ್ಕೃತಿನ ಕಡೆ ನಿಗಾ ಕೊಡೊಕು ತ ಹೇಳ್ದೊ.

ಮುಖ್ಯ ನೆಂಟ್ರ್‌ಗಳಾಗಿ ಬಂದಿದ್ದ ಬಿ.ಎಸ್.ಎನ್.ಎಲ್ ಸಬ್ ಡಿವಿಜ಼ನ್ ಅಧಿಕಾರಿ ಹೊಸೂರು ಗೀತಾ ರಮೇಶ್ ಅವು ಮಾತಾಡಿ ನಮ್ಮಲ್ಲಿ ಆತ್ಮವಿಶ್ವಾಸ, ಸ್ವಾಭಿಮಾನ ಇರೊಕು. ಇವು ಎರಡ್ ಇದುವ ಸಮಾಜಗ ಮುಂದುವರ್‍ದದೆ. ಮಕ್ಕ ಯಾವ ಕ್ಷೇತ್ರಲಿ ಸಾಧನೆ ಮಾಡಿವೆನೋ ಅದನ ನೋಡಿ ಬೆನ್ನ್ ತಟ್ಟೊಕು. ಅವರವರ ಕನ್ಸ್ ಅವರದ್ದ್, ಇನ್ನೊಬ್ಬ ಅದನ ತಯಾರ್ ಮಾಡಿಕೆ ಸಾದ್ಯ ಇಲ್ಲೆ. ಅವವೇ ಬೆಳ್ಸಿಕಣೊಕು. ಇಪ್ಪತ್ತು ವರ್ಷದ ಹಿಂದೆ ನಮ್ಮ ಬಾಸೆನ ಮಾತಾಡಿಕೆ ಜನ ಹಿಂದೆ ಮುಂದೆ ನೋಡ್ತಾ ಇದ್ದೊ. ಆದರೆ ಈಗ ಅಭಿಮಾನ ಬಂದುಟು. ನಮ್ಮ ಬಾಸೆಲಿರುವ ಹಳೇ ಪದಗಳ್‌ನ ಉಳ್ಸಿ ಬೆಳ್ಸಿಕಂಡ್ರೆ ನಮ್ಮ ಬಾಸೆ ಎಂದಿಗೂ ಅಳಿಯದೇ ನಮ್ಮ ಬಾಸೆನ ಬೆಳ್ಸುದರೊಟ್ಟಿಗೆ ಬೇರೆ ಬಾಸೆಗಳ್ನ ಇಷ್ಟಪಡೊಕು. ಹಿರಿಯರ ಅನುಭವ, ಕಿರಿಯರ ಆಶಯನ ಪಡ್ಕಂಡ್ ಮುಂದೆ ಪೋಯಿತ ಹೇಳ್ದೊ.

ಸಂಘದ ಹಿರಿಯವರಾದ ಪರಿವಾರನ ಅಪ್ಪಾಜಿ ಅವು ಮಾತಾಡಿ ಮಕ್ಕಳ ಹೆತ್ತವು ಯಾವುದೇ ಕಾರಣಕ್ಕೂ ಮಕ್ಕಳಿಗೆ ಮೊಬೈಲ್ ಫೋನ್‌ನ ಕೊಡಕ್ಕಾದ್ ಇದರ್‌ಂದ ಮಕ್ಕ ದಾರಿ ತಪ್ಪುತಾ ಒಳೋತಾ ಬೇಜಾರ್‌ಪಟ್ಟೊ.

ಮೀನುಗಾರಿಕೆ ಇಲಾಖೆನ ಸಹಾಯಕ ನಿರ್ದೇಶಕಿ ಕುದುಕುಳಿ ಮಿಲನ ಭರತ್ ಅವು ಮಾತಾಡಿ ಏನಾರ್ ಸಾಧನೆ ಮಾಡುವ ಹಂತಲಿ ಯಾರ್‌ಂದಲೂ ಸಹಾಯ ಸಿಕ್ಕುಲೇ ಸಾದನೆ ಮಾಡಿಕೆ ಕುಸಿ ಇರುವ ಮಕ್ಕಳಿಗೆ ಮಾರ್ಗದರ್ಶನ ಕೊಡಿಕೆ ಸಂಘದ ಕಡೆಂದ ವ್ಯವಸ್ಥೆ ಮಾಡ್ರೆ ಒಳ್ಳೆದ್‌ತ ಹೇಳ್ದೊ.

ಡಾಕ್ಟರ್ ಕೂಡಕಂಡಿ ದಯಾನಂದ ಅವು ಮಾತಾಡಿ ಯಾರಾರ್ ದೊಡ್ಡ ಚಾಕರಿನ ಪರೀಕ್ಷೆ ಬರಿಯವ್ಕೆ, ಸಂಶೋಧನೆ ಮಾಡಿಕೆ ಹೋಕನ ಹಿರಿಯವು ಅನುಭವಸ್ಥರ್‌ಂದ ಯಾವುದೇ ಸಹಕಾರ ಸಿಕ್ಕುಲೇ ಹಿಂಗಾಗಿ ಕುಸಿ ಇರವ್ಕೆ ನಮ್ಮಲೇ ಇರುವ ದೊಡ್ಡ ಚಾಕರಿಲಿ ಇರವರ್‌ಂದ ತರಬೇತಿ ಕೊಡೊಕುತ ಸಲಹೆ ಮಾಡ್ದೊ.

ಇದೇ ಹೊತ್ತ್‌ಲಿ ಎಸ್.ಎಸ್.ಎಲ್.ಸಿ, ಪಿಯುಸಿ, ಹಂಗೆನೆ ಬೇರೆ ಬೇರೆ ಪೈಪೋಟಿ ಪರೀಕ್ಷೆಗಳ್ಲಿ ಸಾಧನೆ ಮಾಡ್ದ ಮಕ್ಕಳಿಗೆ ಹಂಗೆ ಬೇರೆ ಬೇರೆ ಕ್ಷೇತ್ರಗಳ್ಲಿ ಸಾಧನೆ ಮಾಡ್ದವರ್‌ನ ಗುರ್‌ತಿಸಿ ಅವ್ಕೆ ಪ್ರತಿಭಾ ಪುರಸ್ಕಾರ ಕೊಟ್ಟ್ ಸನ್ಮಾನ ಮಾಡಿ ಗೌರವಿಸಿದೊ. ಸ್ವಾತಂತ್ರ್ಯ ದಿನಾಚರಣೆ ಪ್ರಯುಕ್ತ ಮಕ್ಕಳ್‌ಗೆ ಏರ್ಪಾಟ್ ಮಾಡ್ದ ತರಾವರಿ ಪೈಪೋಟಿಲಿ ಗೆದ್ದ ಮಕ್ಕಳಿಗೆ ಇನಾಮುನ ಕೊಟ್ಟೊ.

ಜಂಬರಲಿ ಕುಯ್ಯಮುಡಿ ಸುಲೋಚನಾ ಅಪ್ಪಾಜಿ, ಸಂಘದ ನಿರ್ದೇಶಕರ್, ಸದಸ್ಯರ್, ಹಿರಿಯವು, ಮುಖ್ಯಪಟ್ಟವು ಸೇರ್ದಂಗೆ ಜನಾಂಗ ಬಾಂಧವು ಭಾಗವಹಿಸಿದ್ದೊ.

## TERMS AND CONDITIONS:

* CORNER SITES will be charge extra 15% as on base price. * First 2 Instalments is compulsory within 6 months from the date of booking. * After plan sanction from BIAAPA or from 3rd instalment **Loan will be Available** in all national and other bank. * Registration fees, stamp duty and other expenses bare by site purchaser. * Membership compulsory for site booking.

N
Kempegowda Internationation Airport
KIADB Aero Space Park
Devanahalli Town
To Hyderabad
Godrej Reserve
DC Office
Proposed IT park
Telecom Diamond City Phase -1
Satellite Town Ring Road - NH 207
Park Lane PC Realty
Shobha Life Syle
Orchid Nirvana
Kundana Circle
IVC Road
Sadahalli Signal
Club Cabana
Clark's Exotica
Jain Heights Rain Forest
Telecom Green Field Garden Phase -2
Telecom Green Field Garden Phase -1
ITC
NH-7
VIT College
Air force
Chapparadakallu Road
Police Station
Century Greens
Adarsha Engineering College
L&T
K.I.D.B.A
Telecom Green Field Garden Phase -3,4,5
Embassy Stone Hills School
Padukone - Dravid Center for Sports
Nagenahalli Cross
TOLL
Doddabalapura Road
Doddabalapura Town
Columbia Asia Hospital
B.M.S Engineering College
Yelahanka
Jakkur Aerodrome
Hebbal
K.R. Puram
Mysore Road
Milan Ventures
"Its your journey. We're Here to Help."

## SURROUNDING DISTANCE

*8km from SADAHALLI signal | 15 minutes drive from AIRPORT | 28km from HEBBAL | 7KM From NH 7*
*2 minutes from IVC Road, 5 minutes to New Deputy commissioner office, Vishwanathapura Police Station & Satellite Town Ring Road | 15 minutes to Padukone Dravid Sports Center & Embassy Stonehill School*

**Promoted by**




**Marketing, Legal Opinion, Change of Land Use, Conversions, Plan Approval, Documentation & Registration**


**Mob: 8105778601, 8105778602**
For Site booking please call between 10.00am to 7.00pm

**#6/1, Pillar No.40, Yashoda Nagara, Opposite Jakkur Aerodrome, Bellary Road, Bengaluru-560064. India**


**Architects**



**Geo-Metage Consultants**


Ph: 080-23351801
# 26, 2nd Main, 1st phase, 1st stage, service road, West of chord road, Manjunathanagar, Bangalore - 560010.



# ಟೆಲಿಕಾಂ ಎಂಪ್ಲಾಯೀಸ್ ಅಂಡ್ ಅದರ್ಸ್ ಹೌಸಿಂಗ್ ವೆಲ್‌ಫೇರ್ ಟ್ರಸ್ಟ್ (ರಿ)

# TELECOM EMPLOYEES AND OTHERS HOUSING WELFARE TRUST(R)

No.5 (old no.165) 3rd Main, Weavers Colony, Ganganagar Extension, Bengaluru - 560032

## PROPOSED TELECOM DIAMOND CITY PHASE 1

999/- Per Sqft

* Fixed Price




* Possession will be deliver in 2020




N
W
E
S

**BOOKING OPEN FOR EMPLOYEES & GENERAL PUBLIC**

**LIMITED SITES FOR SELECTION**

**PRICE SPECIFICATIONS**

*Area - 30X40*

*Sqft - 1200*

*Per Sqft - ₹ 999*

*Total Amount - ₹ 11,98,800*

**ODD SITES AVAILABLE IN 50FEET ROAD**

*instalments*

**₹2,99,700 X 4 Ins**

ALLOTMENT OF SITES WILL BE CONFIRMED ON THE FIRST COME FIRST SERVE BASIS
THOSE INTERESTED IN BOOKING THE SITES CAN MAKE THE PAYMENT IN FAVOR OF
**TELECOM EMPLOYEES AND OTHERS HOUSING WELFARE TRUST ®**
THROUGH CHEQUE / DD BY PAYING A MEMBERSHIP FEE OF RS.2000/-